# ಸಂಸ್ಕೃತ ನಾಟಕ ಕಥೆಗಳು

(ಮೊದಲನೆಯ ಭಾಗ)

ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರೀ

ಬೆಂಗಳೂರು ಪ್ರೆಸ್
ಮೈಸೂರು ರೋಡು, ಬೆಂಗಳೂರು ೨
೧೯೪೩

ಸಾಹಿತಿಗಳೂ

ಸಾಹಿತ್ಯಾಭಿಮಾನಿಗಳೂ,

ಕನ್ನಡದ ಮುನ್ನಡೆಯಲ್ಲಿ ಆಸಕ್ತಿಯುಳ್ಳವರೂ

ಆದ

**ಶ್ರೀಮಾನ್ ಸೋಸಲೆ ಗರಳಪುರಿಶಾಸ್ತ್ರಿಗಳು**

ಬಿ. ಎ., ಎಂ. ಎಸ್‌ಸಿ. (ಲಂಡನ್)

ಎಫ್. ಸಿ. ಎಸ್. ಅವರಿಗೆ

ಕೃತಜ್ಞತೆಯ

ಕಾಣಿಕೆ

# ಮುನ್ನುಡಿ

ಸಂಸ್ಕೃತ ನಾಟಕ ಕಥೆಗಳನ್ನು ಬರೆದು ಪ್ರಕಟಿಸಬೇಕೆಂಬ ನನ್ನ ಸಂಕಲ್ಪವು ಶ್ರೀಮಾನ್ ಸೋಸಲೆ ಗರಳಪುರಿ ಶಾಸ್ತ್ರಿಗಳವರ ಪ್ರೋತ್ಸಾಹದಿಂದ ಈಡೇರಿದುದಕ್ಕಾಗಿ ಸಂತೋಷವನ್ನು ವ್ಯಕ್ತಪಡಿಸುವುದು ನನ್ನ ಮೊದಲನೆಯ ಕರ್ತವ್ಯ. ಅವರ ಸಹಾಯದಿಂದಲೇ ಬೆಳಕುಕಂಡಿರುವ ಈ ಮೊದಲನೆಯ ಭಾಗವನ್ನು ಅವರಿಗೆ ಕೃತಜ್ಞತೆಯ ಗುರುತಾಗಿ ಕಾಣಿಕೆಯೊಪ್ಪಿಸಿದ್ದೇನೆ.

ಸಂಸ್ಕೃತ ಸಾಹಿತ್ಯವು ಪುರಾತನವಾದುದು. ಭರತಖಂಡದ ವಿವಿಧ ಭಾಷೆಗಳಿಗೆ ಸಂಸ್ಕೃತವು ಮಾತೃಸ್ಥಾನದಲ್ಲಿರುವುದೇ ಅಲ್ಲದೆ, ಅದರ ಸಂಸ್ಕೃತಿಯ ಸಂಕೇತವೂ ಆಗಿದೆ. ಭಾರತೀಯ ಭಾಷೆಗಳಲ್ಲಿ ಈಚೆಗೆ ಉಂಟಾಗಿರುವ ನಾನಾಮುಖವಾದ ಬೆಳವಣಿಗೆಗೆ, ಅದರಲ್ಲಿಯೂ ಪ್ರಮುಖವಾಗಿ ಅವುಗಳಲ್ಲಿಯ ನಾಟಕಗಳ ಏಳಿಗೆಗೆ, ಮುಖ್ಯವಾಗಿ ಸಂಸ್ಕೃತದಿಂದ ಸ್ಫೂರ್ತಿಯೂ ಪ್ರೇರಣೆಯೂ ದೊರಕಿವೆ. ಆದುದರಿಂದ ಸಂಸ್ಕೃತ ನಾಟಕ ಸಾಹಿತ್ಯದ ಹೆಚ್ಚಾದ ಪರಿಚಯವು ನಮ್ಮ ಜನಕ್ಕೆ, ಅದರಲ್ಲಿಯೂ ವಿದ್ಯಾರ್ಥಿಗಳಿಗೆ, ಆಗಬೇಕೆಂಬ ಉದ್ದೇಶದಿಂದ ಈ ಪುಸ್ತಕವನ್ನು ಬರೆದಿದ್ದೇನೆ.

ಈ ಭಾಗದಲ್ಲಿ ಐದು ಸಂಸ್ಕೃತ ನಾಟಕ ಕಥೆಗಳನ್ನು ಕೊಟ್ಟಿದೆ— ಭಾಸ ಮಹಾಕವಿಯ 'ಪ್ರತಿಮಾ'. ಮಹಾಕವಿ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ಮತ್ತು 'ಮಾಲವಿಕಾಗ್ನಿಮಿತ್ರ'. ಶ್ರೀಹರ್ಷ ಮಹಾಕವಿಯ 'ನಾಗಾನಂದ' ಮತ್ತು ಭಟ್ಟನಾರಾಯಣ ಮಹಾಕವಿಯ 'ವೇಣೀಸಂಹಾರ'. ಉಳಿದವನ್ನು ಮುಂದೆ ಐದು ಭಾಗಗಳಲ್ಲಿ ಪ್ರಕಟಿಸಬೇಕೆಂದು ಬಯಸಿದ್ದೇನೆ.

ಈ ಕಥೆಗಳನ್ನು ಬರೆಯುವ ಮುಂಚೆ ಕನ್ನಡದಲ್ಲಿಯೂ ಇಂಗ್ಲಿಷಿನಲ್ಲಿಯೂ ಸಂಸ್ಕೃತದಲ್ಲಿಯೂ ಈವರೆಗೆ ಪ್ರಕಟವಾಗಿರುವ ಕೆಲವು ನಾಟ-

ಕಥಾನುವಾದಗಳನ್ನೂ ಅವಕ್ಕೆ ಸಂಬಂಧಿಸಿದ ಸಾಹಿತ್ಯವನ್ನೂ ಓದಿ ಉಪಕೃತನಾಗಿರುವೆನೆಂಬ ಸಂಗತಿಯನ್ನಿಲ್ಲಿ ಹೇಳುವುದು ಅನುಚಿತವಾಗಲಾರದು. ಸಾಧ್ಯವಾದಮಟ್ಟಿಗೆ ಮೂಲ ನಾಟಕಗಳ ಸಂವಿಧಾನವು ಕೆಡದಂತೆಯೂ, ಕಥೆಗಳು ಅತಿ ದೀರ್ಘವಾಗಿ ಬೆಳೆಯದಂತೆಯೂ ಎಚ್ಚರ ತೆಗೆದುಕೊಂಡಿದ್ದೇನೆ. ಆದರೂ ಇವುಗಳಲ್ಲಿರಬಹುದಾದ ಕುಂದುಕೊರತೆಗಳನ್ನು ಮುಂದಿನ ಆವೃತ್ತಿಯಲ್ಲಿ ಸರಿಪಡಿಸಿಕೊಳ್ಳುವೆನೆಂದು ವಿನಯದಿಂದ ವಿಜ್ಞಾಪಿಸಿಕೊಳ್ಳುತ್ತೇನೆ.

ಸಂಸ್ಕೃತ ನಾಟಕಗಳ ಮತ್ತು ಕವಿಗಳ ವಿಚಾರವನ್ನು ವಿವರವಾಗಿ ತಿಳಿಯಲು ಬಯಸುವವರು ಕನ್ನಡದಲ್ಲಿ ಅಮೂಲ್ಯ ವಿಮರ್ಶನ ಸಂಶೋಧನ ಗ್ರಂಥಗಳಾಗಿರುವ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ. ಅವರ 'ಸಂಸ್ಕೃತ ನಾಟಕ' ಮತ್ತು 'ಭಾಸಕವಿ', ಶ್ರೀಮಾನ್ ಸಿ. ಕೆ. ವೆಂಕಟರಾಮಯ್ಯ, ಎಂ.ಎ., ಎಲ್‌ಎಲ್.ಬಿ. ಅವರ 'ಭಾಸ ಮಹಾಕವಿ' ಮತ್ತು ಶ್ರೀಮಾನ್ ಎಂ. ಎನ್. ಶ್ರೀನಿವಾಸ ಅಯ್ಯಂಗಾರ್ ಅವರ 'ಸಂಸ್ಕೃತ ಕವಿಚರಿತೆ' ಎಂಬ ಗ್ರಂಥಗಳನ್ನು ಓದಬೇಕೆಂದು ಬಿನ್ನಹ.

ಕಡೆಯದಾಗಿ, ಈ ಪುಸ್ತಕದ ಪ್ರಕಟನೆಯಲ್ಲಿ ನನಗೆ ನೆರವಾದ ಆಪ್ತಮಿತ್ರರಿಗೂ, ಇದನ್ನು ಅತ್ಯಲ್ಪಕಾಲದಲ್ಲಿ ಅಂದವಾಗಿ ಅಚ್ಚುಮಾಡಿಕೊಟ್ಟ ಬೆಂಗಳೂರು ಪ್ರೆಸ್ಸಿನ ಅಧಿಕಾರಿಗಳಿಗೂ ನನ್ನ ವಂದನೆಗಳು.

ಬೆಂಗಳೂರು
ತಾ॥ ೨೬–೩–೧೯೪೩

**ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರೀ**

# ಕಥೆಗಳ ವಿವರ

# ಪ್ರತಿಮಾ

ದೇವಾಸುರ ಸಂಗ್ರಾಮಗಳಲ್ಲಿ ಅಪ್ರತಿಹತರಥನಾಗಿ, ಮಹೋನ್ನತವಾದ ಕೀರ್ತಿಯನ್ನು ಗಳಿಸಿದ ಸಾಕೇತ ಸಾಮ್ರಾಜ್ಯದ ಒಡೆಯನಾದ ದಶರಥ ಮಹಾರಾಜನು ಬಹುಕಾಲ ರಾಜ್ಯಾಡಳಿತದ ಹೊರೆಯನ್ನು ಹೊತ್ತು, ತನಗೆ ಮುಪ್ಪು ಬಂದುದನ್ನು ಮನಸ್ಸಿಗೆ ತಂದುಕೊಂಡು, ಹಿರಿಯ ಮಗನಾದ ರಾಮಚಂದ್ರನಿಗೆ ಪಟ್ಟಕಟ್ಟಿ ವಾನಪ್ರಸ್ಥಾಶ್ರಮಿಯಾಗಲು ಬಯಸಿದನು. ಅವನು ಸಭೆ ಕೂಡಿಸಿ, ಉಪಾಧ್ಯಾಯರು, ಅಮಾತ್ಯರು, ಪಟ್ಟಣದ ಮುಖಂಡರು, ಸಾಮಂತರಾಜರು ಮೊದಲಾಗಿ ಎಲ್ಲರಿಗೂ ತನ್ನ ಉದ್ದೇಶವನ್ನು ತಿಳಿಸಿ, ಅವರೆಲ್ಲರೂ ಆನಂದಭರಿತರಾಗಿ ಏಕಕಂಠದಿಂದ ಸಮ್ಮತಿಯನ್ನೀಯಲು ಜನಲೋಚನ ಚಂದ್ರನಾದ ರಾಮಚಂದ್ರನ ಪಟ್ಟಾಭಿಷೇಕ ಮಹೋತ್ಸವಕ್ಕೆ ಸಂಭಾರಗಳೆಲ್ಲವನ್ನೂ ಸಜ್ಜುಗೊಳಿಸಬೇಕೆಂದು ಮಂತ್ರಿಜನರಿಗೆ ಆಜ್ಞೆಯಿತ್ತನು.

ಶರತ್ಕಾಲವು ಸಮೀಪಿಸುತ್ತಲೆ ಅಯೋಧ್ಯೆಯಲ್ಲಿ ಅಭಿಷೇಕದ ಸಿದ್ಧತೆಗಳೆಲ್ಲವೂ ಸಡಗರದಿಂದ ನಡೆಯತೊಡಗಿದುವು. ಅರಮನೆಯೆಲ್ಲ ಸಿಂಗರವಾಯಿತು. ಶ್ವೇತಚ್ಛತ್ರ ಚಾಮರಗಳು, ಭದ್ರಾಸನ, ತೀರ್ಥೋದಕದ ಸ್ವರ್ಣಕಲಶಗಳು, ಮೆರವಣಿಗೆಯ ಪುಷ್ಯರಥ— ಮೊದಲಾದ ಪಟ್ಟಾಭಿಷೇಕದ ಎಲ್ಲ ಸಲಕರಣಗಳೂ ಅಣಿಯಾದುವು. ಮಂತ್ರಿಸಹಿತರಾದ ಪೌರಜಾನಪದರು ಅಭಿಷೇಕ ದಿದೃಕ್ಷುಗಳಾಗಿ ಅರಮನೆಯಲ್ಲಿ ನೆರೆದರು. ದಶರಥ ಭೂಪಾಲನು ರಾಮಾಭಿಧಾನನಾದ ಶಶಾಂಕನನ್ನು ಮೇದಿನೀಪತಿಯನ್ನಾಗಿ ಅಭಿಷೇಚಿಸಿ ಸಾಕೇತ ಸಾಮ್ರಾಜ್ಯದ ಪ್ರಜೆಗಳೆಲ್ಲರನ್ನೂ ಕೃತಕೃತ್ಯರನ್ನಾಗಿ ಮಾಡುವನೆಂದು ಹುಡುಗರು, ಹೆಂಗಸರು, ಹರೆಯರು, ಮುದುಕರು ಎಲ್ಲರೂ ಅತಿಶಯ ಸಂತೋಷದಿಂದ ನಿರೀಕ್ಷಿಸುತ್ತಿದ್ದರು.

ದಶರಥನು ಮಗನನ್ನು ಕರೆಯಿಸಿಕೊಂಡು ಮಧುರವಾಗಿ ಮಾತನಾಡಿಸಿ, ರಾಜ್ಯವನ್ನು ಸ್ವೀಕರಿಸೆಂದು ನುಡಿದನು. ರಾಮನು ತಂದೆಯ ಅಡಿಗಳಿಗೆರಗಿ ಆನಂದಬಾಷ್ಪಗಳನ್ನು ಸುರಿಸಲು, ದಶರಥನಿಗೂ ಆನಂದವಾಯಿತು. ಇಬ್ಬರೂ ಅನಿರ್ವಚನೀಯವಾದ ಆನಂದವನ್ನನುಭವಿಸಿದರು.

ತರುವಾಯ ಸಭಾಂಗಣದಲ್ಲಿ ಶತ್ರುಘ್ನ ಲಕ್ಷ್ಮಣರು ತೀರ್ಥೋದಕ ಕಲಶಗಳನ್ನು ಹಿಡಿದು ಅಭಿಷೇಕ ಸಂಭ್ರಮದಲ್ಲಿರಲು, ದಶರಥನು ತಾನೇ ಶ್ವೇತಚ್ಛತ್ರವನ್ನು ಹಿಡಿದು ಆನಂದಬಾಷ್ಪಗಳನ್ನು ಸುರಿಸುತ್ತಿರಲು ಆ ಅಂತರದಲ್ಲಿಯೇ ಮಂಥರೆಯು ಸಂಭ್ರಾಂತಳಾಗಿ ಬಂದು ರಾಜನ ಕಿವಿಯಲ್ಲಿ ಏನನ್ನೋ ಉಸುರಿದಳು. ರಾಜನು ಸ್ತಂಭಿತನಾಗಿ ಅಭಿಷೇಕ ಪ್ರಯತ್ನವನ್ನು ಅಲ್ಲಿಗೇ ನಿಲ್ಲಿಸಿ, ರಾಮನನ್ನು ವಿಶ್ರಮಿಸಿಕೊಳ್ಳೆಂದು ಹೇಳಿ ಕಳುಹಿಸಿಬಿಟ್ಟನು.

ಪಟಹ ಧ್ವನಿಯು ಎಲ್ಲೆಲ್ಲಿಯೂ ಘೋರ್ಗರೆಯುತ್ತಿರಲು ರಾಮನು ಭದ್ರಾಸನವನ್ನಲಂಕರಿಸಿ ಅಭಿಷೇಕ ಸಮಾರಂಭವು ನಡೆಯುವಷ್ಟರಲ್ಲಿಯೇ ವಿಘ್ನಬಂದುದನ್ನು ಕಂಡು ಸಭೆಗೆ ಸಭೆಯೇ ಬೆರಗಾಗಿ ಹೋಯಿತು. ಆದರೆ, ರಾಮನಿಗೆ ಮಾತ್ರ ತಂದೆಯು ಅಭಿಷೇಕವನ್ನು ನಡೆಯಿಸದೆ ಇದ್ದುದಕ್ಕೆ ಅಮಿತಾನಂದವಾಯಿತು. ಮಹಾರಾಜನು ಮಹಾರಾಜನಾಗಿಯೇ ಉಳಿದು ತಾನು ಎಂದಿನ ರಾಮನೇ ಆದೆನೆಂದು ಅವನ ತಣಿವಿಗೆ ಪಾರವೇ ಇಲ್ಲವಾಯಿತು. ಅವನು ತನ್ನ ಆನಂದವನ್ನು ಸಹಧರ್ಮಿಣಿಯಾದ ಮೈಥಿಲಿಗೆ ತಿಳಿಸುವ ಕುತೂಹಲದಿಂದ ಅಂತಃಪುರಕ್ಕೆ ಹೋದನು.

ಇತ್ತ ಅಂತಃಪುರದಲ್ಲಿ ಸೀತೆಯು ಅಭಿಷೇಕದ ಸುದ್ದಿಯನ್ನು ತಂದು ಹೇಳಿದ ಚೇಟಿಗೆ ತಾನು ತೊಟ್ಟಿದ್ದ ಒಡವೆಗಳನ್ನೆಲ್ಲ ಮೆಚ್ಚುಕೊಟ್ಟು ಆನಂದಪರವಶೆಯಾಗಿದ್ದಳು. ಆ ಸಮಯದಲ್ಲಿಯೇ ಅವದಾತಿಕೆಯೆಂಬ ಮತ್ತೊಬ್ಬ ಚೇಟಿಯು ನಾಟ್ಯಶಾಲೆಯಿಂದ ನಾರುಡೆಯೊಂದನ್ನು ಪರಿಹಾಸಕ್ಕಾಗಿ ಕದ್ದು ತಂದು, ಆ ಮೂಲಕ ದೇವಿಯನ್ನು ವಿನೋದಗೊಳಿಸಬಯಸಿದಳು. ಜಾನಕಿಯು, ಪರಿಹಾಸಕ್ಕಾದರೂ ಕದಿಯುವುದು ಬಹಳ ತಪ್ಪೆಂದು ಅವಳಿಗೆ ಬುದ್ಧಿ ಹೇಳಿ, ಅದನ್ನು ಹಿಂತಿರುಗಿಸಬೇಕೆಂದು

ಅಪ್ಪಣೆ ಮಾಡಿದಳು. ಆದರೂ ನಾರುಡೆಯ ಮೇಲಿನ ಮಮತೆಯಿಂದ ಅವಳು ಅದನ್ನು ಅವದಾತಿಕೆಯಿಂದ ತೆಗೆದು ಉಟ್ಟುಕೊಂಡು ಕನ್ನಡಿಯಲ್ಲಿ ತನ್ನ ಅಲಂಕಾರವನ್ನು ನೋಡಿ ಆನಂದಿಸುತ್ತಿದ್ದಳು. ಒಳ್ಳೆಯ ರೂಪುಳ್ಳವರಿಗೆ ಎಲ್ಲವೂ ಶೋಭಿಸುತ್ತದೆಯಲ್ಲವೆ? ಆ ನಾರುಡೆ ಯಿಂದಲೇ ಅವಳು ಮತ್ತಷ್ಟು ಚೆಲುವಾಗಿ ತೋರುತ್ತಿದ್ದುದನ್ನು ಕಂಡು ಸಖಿಯರು ನಲಿಯುತ್ತಿದ್ದರು.

ಆ ಸಮಯದಲ್ಲಿಯೇ ರಾಮನು ಅಲ್ಲಿಗೆ ಬಂದು, ನಾರುಡೆಯುಟ್ಟು ಶೋಭಿಸುತ್ತಿರುವ ತನ್ನ ಪ್ರಿಯೆಯನ್ನು ಕಂಡು ವಿಸ್ಮಿತನಾದನು. ಅವಳು ತನ್ನ ಆಭರಣಗಳೆಲ್ಲವನ್ನೂ ಸ್ವಲ್ಪ ಹೊತ್ತಿನ ಹಿಂದೆ ತೆಗೆದುಹಾಕಿ ದ್ದುದು, ಅದರ ಪರಿಣಾಮವಾಗಿ ಅವುಗಳಿದ್ದ ಎಡೆಗಳಲ್ಲೆಲ್ಲ ಗುರುತುಗಳು ಅಚ್ಚೊತ್ತಿದಂತೆ ಕಂಗೊಳಿಸುತ್ತಿದ್ದುದು ಅವನಿಗೆ ಗೊತ್ತಾಯಿತು. ಮಂಗಳ ಸಂರಂಭದಲ್ಲಿ ಹಾಗೆ ನಿರಾಭರಣ ಸುಂದರಿಯಾಗಿ ನಾರುಡೆ ಯುಟ್ಟಿರುವುದೇಕೆಂದು ರಾಮನು ಅವಳನ್ನು ಪ್ರಶ್ನಿಸಿದನು. ಆ ನಾರುಡೆ ತನಗೆ ಒಪ್ಪುವುದೇ ಇಲ್ಲವೇ ಎಂಬುದನ್ನು ತಿಳಿಯುವ ಕುತೂಹಲದಿಂದ ಸೀತೆಯು ಅದನ್ನುಟ್ಟಳೆಂದು ಅವದಾತಿಕೆಯು ಅರಿಕೆ ಮಾಡಿದಳು.

ಇಕ್ಷ್ವಾಕುಗಳಿಗೆ ಮುಪ್ಪಿನಲ್ಲಿ ಅಲಂಕಾರದ ಉಡುಗೆಯಾದ ಆ ನಾರುಡೆಯನ್ನು ಕಂಡು ರಾಮನಿಗೂ ಅದರಲ್ಲಿ ಆದರ ಹುಟ್ಟಿತು. ತಾನೂ ಉಟ್ಟು ಸಂತೋಷಪಡಬೇಕೆಂದು ಅವನಿಗೆ ಆಸೆಯಾಯಿತು. ಅಂತೆಯೆ, ನಾರುಡೆಯನ್ನು ತರಿಸಿಕೊಳ್ಳಬಯಸಿ ಹೇಳಿಕಳುಹಿಸಿದನು. ಆರ್ಯಪುತ್ರನು ಅಮಂಗಳವನ್ನು ನುಡಿಯಕೂಡದೆಂದೂ ನಾರುಡೆ ಯನ್ನುಡಕೂಡದೆಂದೂ ಸೀತೆಯು ತಡೆದಳು. ಅಭಿಷೇಕವನ್ನು ಬಿಟ್ಟು ಬಂದಿರುವ ಪತಿಯ ಮಾತು ಅವಳಿಗೆ ಅಮಂಗಳವಾಗಿ ತೋರಿತು. ತನ್ನ ಅರ್ಧಾಂಗಿಯು ಅದನ್ನುಟ್ಟಾಗಲೇ ತಾನೂ ಉಟ್ಟಂತಾಯಿತೆಂದೂ ಅದರಲ್ಲಿ ಯಾವ ದೋಷವೂ ಇಲ್ಲವೆಂದೂ ರಾಮನು ಅವಳನ್ನು ಸಮಾಧಾನಗೊಳಿಸಿದನು.

ಅಷ್ಟರಲ್ಲಿಯೇ ಅಂತಃಪುರದ ನಾರಿಯರು ಮಹಾರಾಜನನ್ನು ಕುರಿತು ನಿರ್ಮರ್ಯಾದೆಯಾಗಿ ಪ್ರಲಪಿಸಿದ ಧ್ವನಿಯು ಕೇಳಬಂದಿತು.

ಕಾಂಚುಕೀಯನು ರಾಮನ ಸನ್ನಿಧಿಗೆ ಬಂದು, ಮಹಾರಾಜನ ಮೂರ್ಛೆಯ ವಿಚಾರವನ್ನು ಮನವಿ ಮಾಡಿಕೊಂಡನು. ಸ್ವಜನರಿಂದ, ಅದರಲ್ಲಿಯೂ ತನ್ನ ಚಿಕ್ಕ ತಾಯಿಯಾದ ಕೈಕೆಯ ದೆಸೆಯಿಂದ, ಮಹಾರಾಜನ ಸ್ಥಿತಿಯು ಹಾಗಾಯಿತೆಂದು ತಿಳಿದಮೇಲೆ ರಾಮನು ಅದರಲ್ಲೇನೋ ಮುಂದಕ್ಕೆ ಶುಭಫಲಸೂಚಕವಾದ ಗುಣವಿರಬೇಕೆಂದು ಭಾವಿಸಿದನು. ಶಕ್ರಸಮನಾದ ಭರ್ತನುಳ್ಳವಳಾಗಿ, ತನ್ನಿಂದ ಪುತ್ರವತಿಯಾಗಿ, ಇತರ ಯಾವ ಪ್ರಯೋಜನದಲ್ಲಿಯೂ ಸ್ಪೃಹೆಯಿಲ್ಲದಿರುವ ಆಕೆಯು ಎಂದೂ ಅಕಾರ್ಯವನ್ನು ಮಾಡಳೆಂದು ಅಭಿಪ್ರಾಯಪಟ್ಟನು. ಕಾಂಚುಕೀಯನಿಗೆ ರಾಮನ ಮಾತು ಸಹ್ಯವಾಗಲಿಲ್ಲ. ಕೈಕೆಯ ವಚನದಿಂದಲೇ ಅಭಿಷೇಕವು ನಿಂತುದು ಅವನಿಗೆ ಚೆನ್ನಾಗಿ ಗೊತ್ತಿದ್ದಿತು. ಅಪರಾಧಿನಿಯಾದ ಅವಳನ್ನು ರಾಮನು ಆ ರೀತಿ ಪ್ರಶಂಸಿಸಕೂಡದೆಂದು ಅವನು ನೊಂದು ನುಡಿದನು. ತನ್ನ ಅಭಿಷೇಕವು ನಿಂತುದರಲ್ಲಿ ಅನೇಕ ಉತ್ತಮ ಗುಣಗಳಿರುವುವೆಂದು ರಾಮನು ನಿರೂಪಿಸಿದನು. ಪಾರ್ಥಿವನಾದ ದಶರಥನು ವಾನಪ್ರಸ್ಥಾಶ್ರಮಿಯಾಗಿ ವನಕ್ಕೆ ಹೋಗುವುದು ತಪ್ಪಿದುದು, ತಾನು ತಂದೆಯ ಅಧೀನದಲ್ಲಿದ್ದು, ಎಂದಿನ ಬಾಲಭಾವದಿಂದಲೇ ಇರುವಂತಾದುದು, ಪ್ರಜೆಗಳಿಗೆ ಹೊಸ ದೊರೆಯ ವಿಷಯ ಹೇಗೊ ಎಂಬ ಶಂಕೆ ಪರಿಹಾರವಾದುದು, ತಮ್ಮಂದಿರೂ ಸ್ವತಂತ್ರವಾಗಿ ಭೋಗಭಾಗ್ಯಗಳನ್ನು ಅನುಭವಿಸುವಂತೆ ಆದುದು — ಈ ಎಲ್ಲ ಗುಣಗಳೂ ಅಭಿಷೇಕವು ನಿಂತುದರಿಂದ ಉಂಟಾದುವೆಂದು ರಾಮನು ಸಮರ್ಥಿಸಿದನು. ಇಷ್ಟೇ ಅಲ್ಲದೆ ದೊರೆಯು ಮದುವೆಯ ಕಾಲದಲ್ಲಿ ಶುಲ್ಕವಾಗಿ ಕೊಟ್ಟಿದ್ದ ರಾಜ್ಯವನ್ನು ತನ್ನ ಮಗನಿಗಾಗಿ ಆಶಿಸಿದ್ದರಲ್ಲಿ ಕೈಕೆಗೆ ಯಾವ ದೋಷವೂ ತಟ್ಟುವುದಿಲ್ಲವೆಂದು ಅವನು ಕಾಂಚುಕೀಯನನ್ನು ಸಮಾಧಾನಗೊಳಿಸಿದನು.

ಆ ಹೊತ್ತಿಗೆ ಸರಿಯಾಗಿ ಕೈಕೆಯ ವರಪ್ರಾರ್ಥನೆಯಿಂದ ಮಹಾರಾಜನು ಮೂರ್ಛಿತನಾಗಿರುವನೆಂಬ ಸುದ್ದಿಯನ್ನು ತಿಳಿದು ಲಕ್ಷ್ಮಣನು ಬಹಳವಾಗಿ ಮುನಿದು ಧನುರ್ಬಾಣಗಳನ್ನು ಹಿಡಿದು ಜಗತ್ತನ್ನೇ ಯುವತಿರಹಿತವನ್ನಾಗಿ ಮಾಡುವುದಾಗಿ ಆರ್ಭಟಿಸುತ್ತ ರಾಮನ ಬಳಿಗೈದಿದನು.

ದುಃಖಿಸಬೇಕಾದ ಸನ್ನಿವೇಶದಲ್ಲಿ ಧನುರ್ಬಾಣಗಳನ್ನು ತೊಟ್ಟು ವೀರವನ್ನು ಮೆರೆಯುತ್ತಿರುವ ಲಕ್ಷ್ಮಣನನ್ನು ಕಂಡು ಸೀತಾ ರಾಮರಿಬ್ಬರಿಗೂ ವ್ಯಸನವಾಯಿತು. ಕ್ರಮಪ್ರಾಪ್ತವಾದ ರಾಜ್ಯವು ಅಪಹೃತವಾಗಿ, ಮಹಾರಾಜನೂ ಶೋಚನೀಯಾವಸ್ಥೆಯಲ್ಲಿರುವಾಗ ಕ್ಷಮೆವಹಿಸುವುದು ಸೂಕ್ತವಲ್ಲವೆಂದು ಲಕ್ಷ್ಮಣನು ವಾದಿಸಿದನು. ಅವನಿಗೆ ರೋಷವನ್ನು ತಡೆಯಲಾಗಲಿಲ್ಲ. ತಾನಾಡಿದ ಮಾತುಗಳನ್ನು ಯಥಾರ್ಥವಾಗಿ ನಡೆಯಿಸಲುಜ್ಜುಗಿಸಿ ತೆರಳುವುದರಲ್ಲಿದ್ದನು. ಅಷ್ಟರಲ್ಲಿ ರಾಮನು ಅವನನ್ನು ನಿಲ್ಲಿಸಿ, ''ಸತ್ಯವಚನನಾದ ತಂದೆಯಲ್ಲಿ, ಸ್ವಧನವನ್ನು ಸಂಪಾದಿಸಿಕೊಂಡಿರುವ ತಾಯಿಯಲ್ಲಿ, ಹೊರನಾಡಿನಲ್ಲಿರುವ ಭರತನಲ್ಲಿ, ಶರವನ್ನು ಪ್ರಯೋಗಿಸಿ ಪಾತಕವನ್ನು ಕಟ್ಟಿಕೊಳ್ಳುವುದು ತರವಲ್ಲ'' ಎಂದೂ, ಅತುಲ ಪರಾಕ್ರಮವನ್ನೆಲ್ಲ ದೊರೆಯಾಗುವ ಭರತನನ್ನು ಓಲೈಸುವುದರಲ್ಲಿ ವಿನಿಯೋಗಿಸಬೇಕೆಂದೂ ಹೇಳಿ ಅವನನ್ನು ಸಮಾಧಾನಗೊಳಿಸಿದನು.

ಹದಿನಾಲ್ಕು ವರ್ಷಗಳ ವನವಾಸವನ್ನು ತಾನು ಅನುಭವಿಸಬೇಕೆಂಬ ಕೈಕೆಯ ವರಾಭಿಲಾಷೆಯು ಲಕ್ಷ್ಮಣನಿಂದ ರಾಮನಿಗೆ ತಿಳಿಯಿತು. ಅದರಂತೆ ನಡೆಯಲು ಅವನು ಸಿದ್ಧನಾದನು. ಮೈಥಿಲಿಯು ಅರ್ಧಾಂಗಿಯಾದ ತಾನೂ ಸಹಧರ್ಮಚಾರಿಣಿಯಾಗುವುದಾಗಿ ಮೊರೆಯಿಟ್ಟಳು. ವನವಾಸದ ಕಷ್ಟಗಳನ್ನು ಕೇಳಿಯೂ ತನ್ನೊಡನೆ ಬರುವುದಾಗಿ ಒತ್ತಾಯ ಮಾಡಿದ ಅವಳನ್ನು ಕರೆದುಕೊಂಡುಹೋಗಲು ಅವನು ಸಮ್ಮತಿಸಿದನು. 'ರಾಹುದೋಷದಲ್ಲಿಯೂ ತಾರೆಯು ಶಶಾಂಕನನ್ನೇ ಅನುಸರಿಸುವುದು; ವನವೃಕ್ಷವು ನೆಲಕ್ಕೆ ಬಿದ್ದೊಡನೆ ಲತೆಯೂ ಅದರೊಡನೆಯೇ ಬೀಳುವುದು; ಗಜೇಂದ್ರನು ಕೆಸರಿನಲ್ಲಿ ಸಿಲುಕಿದರೂ ಅದನ್ನು ಹೆಣ್ಣಾನೆ ತೊರೆಯದು; ಇಂತಿರಲು ಸೀತೆ ತನ್ನ ಧರ್ಮವನ್ನು ತಾನು ಪಾಲಿಸುವುದೇ ತಕ್ಕುದು' ಎಂದು ಲಕ್ಷ್ಮಣನು ಹೇಳಿದ ಮಾತು ರಾಮನಿಗೆ ರುಚಿಸಿತು. ರಾಮನು ತನ್ನೊಡನೆ ಅವಳನ್ನು ಕರೆದುಕೊಂಡುಹೋಗಲು ಒಡಂಬಟ್ಟನು.

ಆ ಸಮಯಕ್ಕೆ ಸರಿಯಾಗಿ ಚೇಟಿಯೊಬ್ಬಳು, ಅವದಾತಿಕೆಯು ನಾಟ್ಯಶಾಲೆಯಿಂದ ಬಳಸಿದ ನಾರುಡೆಯನ್ನು ಕೊಂಡುಬಂದುದಾಗಿಯೂ ಅದನ್ನು ಬಳಸಕೂಡದೆಂದೂ, ನೇಪಥ್ಯಪಾಲಿನಿಯು ಹೊಸನಾರುಡೆಯನ್ನು

ಕೊಟ್ಟು ಕಳುಹಿಸಿರುವಳೆಂದೂ ಅರಿಕೆಮಾಡಿದಳು. ವನಗಮನಕ್ಕೆ ಸಿದ್ಧವಾಗಿದ್ದ ತನಗೆ ಆ ಉಡೆ ಆವಶ್ಯಕವೆಂದು ರಾಮನು ಅದನ್ನು ಅವಳಿಂದ ತೆಗೆದುಕೊಂಡು ಉಟ್ಟುಕೊಂಡನು. ಆಗ ಲಕ್ಷ್ಮಣನು, ಸಮಸ್ತ ಸುಖಗಳಲ್ಲಿಯೂ ಸಮ ಸಮವಾಗಿ ಅರ್ಧ ಭಾಗವನ್ನು ಅನುಭವಿಸುತ್ತಿರುವ ತನಗೂ ನಾರುಡೆ ಕೊಡಬೇಕೆಂದು ರಾಮನನ್ನು ಪ್ರಾರ್ಥಿಸಿದನು. ಬೇಡವೆಂದು ಸಮಾಧಾನಗೊಳಿಸಿದರೂ ಒಪ್ಪದೆ, ಭ್ರಾತೃಸೇವೆಯಲ್ಲಿ ಉತ್ಸಾಹಪೂರಿತನಾಗಿದ್ದ ಅವನಿಗೆ ರಾಮನು ನಾರುಡೆಯನ್ನು ಕೊಡಲೇಬೇಕಾಯಿತು; "ಲಕ್ಷ್ಮಣಾ! ನಾರುಡೆ ತಪಸ್ಸಂಗ್ರಾಮಕ್ಕೆ ಕವಚ, ನಿಯಮವೆಂಬ ಮದಿಸಿದ ಆನೆಯನ್ನು ತಡೆಗಟ್ಟುವ ಅಂಕುಶ, ಇಂದ್ರಿಯಾಶ್ವಗಳ ನಿಯಮನಕ್ಕೆ ಕಡಿವಾಣ, ಧರ್ಮರಥಕ್ಕೆ ಸಾರಥಿ" ಎಂದು ಹೇಳಿ, ಅದನ್ನು ಲಕ್ಷ್ಮಣನಿಗೆ ತರಿಸಿಕೊಟ್ಟನು. ಧನ್ಯನಾದೆನೆಂದು ಲಕ್ಷ್ಮಣನು ಅದನ್ನು ಪರಮಸಂತೋಷದಿಂದ ಉಟ್ಟುಕೊಂಡನು.

ತರುವಾಯ, ಸೀತಾ ರಾಮ ಲಕ್ಷ್ಮಣರು ಮೂವರೂ ವನಗಮನಕ್ಕೆ ಸಿದ್ಧವಾದರು. ಲಕ್ಷ್ಮಣನು ದಾರಿಬಿಡಿಸುತ್ತ ಮುಂದೆ ಹೊರಟನು. ಜನಗಳೆಲ್ಲರೂ ನೋಡುವ ಕುತೂಹಲದಿಂದ ನುಗ್ಗಿಬರುತ್ತಿರಲು, ರಾಮನು ಮೊಗದೆರೆಯನ್ನು ತೆಗೆದುಹಾಕೆಂದು ಸೀತೆಗೆ ಹೇಳಿ, ಕಂಬನಿದುಂಬಿರುವ ಪಟ್ಟಣಿಗರಿಗೆ ತಮ್ಮೆಲ್ಲರ ದರ್ಶನಭಾಗ್ಯವನ್ನಿತ್ತು ವಿಪಿನಾಭಿಮುಖವಾಗಿ ತೆರಳಿದನು.

ಪಟ್ಟಣಕ್ಕೆ ಪಟ್ಟಣವೇ ಶೋಕ ಮಹಾಸಾಗರದಲ್ಲಿ ಮುಳುಗಿ ಹೋಯಿತು. ಆನೆಗಳು ಮೇವುಳಿದು ಕಾಂತಿಗುಂದಿ ಕಂಬನಿಗರೆದುವು. ಕುದುರೆಗಳು ಕೆನೆಯುವುದನ್ನು ನಿಲ್ಲಿಸಿ ಶೂನ್ಯಮುಖಗಳಾಗಿ ನಿಂತುವು. ಬಾಲವೃದ್ಧ ವನಿತೆಯರು ಮೊದಲಾಗಿ ಎಲ್ಲ ಪೌರರೂ ಆಹಾರವನ್ನು ತೊರೆದು ದೀನವದನರಾಗಿ ಸೀತಾ ರಾಮ ಲಕ್ಷ್ಮಣರು ಹೋದ ದಿಕ್ಕನ್ನೇ ನೋಡುತ್ತ ಗಟ್ಟಿಯಾಗಿ "ಅಯ್ಯೋ, ರಾಮನು ಹೊರಟುಹೋದನು" ಎಂದು ಕೂಗಿಕೊಳ್ಳುತ್ತಿದ್ದರು.

ಇತ್ತ ದಶರಥನು ಪುತ್ರವಿರಹ ಶೋಕಾಗ್ನಿಯಿಂದ ದಗ್ಧಹೃದಯನಾಗಿ, ಉನ್ಮತ್ತನಂತೆ ಬಹುವಾಗಿ ಪ್ರಲಪಿಸಿದನು. ಆಗ ಅವನ

ಸ್ಥಿತಿಯು ಪ್ರಲಯಕಾಲಸನ್ನಿಹಿತವಾದ ಸಮಯದಲ್ಲಿ ಚಲಿಸಿಹೋದ ಮೇರುಗಿರಿಯಂತೆ, ಶೋಷಿಸಿಹೋದ ಅಪಾರವಾದ ಮಹಾಸಾಗರ ದಂತೆ, ಮಂಡಲಮಾತ್ರ ಲಕ್ಷ್ಯನಾಗಿ ಬೀಳುತ್ತಿರುವ ಸೂರ್ಯನಂತೆ ಬಹು ಶೋಚನೀಯವಾಗಿದ್ದಿತು. ಶೋಕದಿಂದ ಶಿಥಿಲವಾದ ದೇಹವೂ ಬುದ್ಧಿಯೂ ಉಳ್ಳ ಅವನು ಬಹಳಮಟ್ಟಿಗೆ ದುರ್ಬಲನಾಗಿಹೋದನು.

ಕೌಸಲ್ಯಾ ಸುಮಿತ್ರೆಯರು ತಾವೂ ಆ ಸ್ಥಿತಿಯಲ್ಲಿಯೇ ಇದ್ದರೂ ಪತಿದೇವನನ್ನು ಸಂತಯಿಸುತ್ತಿದ್ದರು. ಆದರೂ ಪುತ್ರವಿರಹ ಶೋಕವು ಉಕ್ಕಿ ಅವನು ಅಡಿಗಡಿಗೂ ಮೂರ್ಛೆಹೋಗುತ್ತ, ಮೂರ್ಛೆ ತಿಳಿದಾಗಲೆಲ್ಲ ರಾಮ ಲಕ್ಷ್ಮಣ ಸೀತೆಯರ ಹೆಸರುಗಳನ್ನು ಉಚ್ಚರಿಸುತ್ತ ಸಂತತವಾಗಿ ಕಣ್ಣೀರಿಟ್ಟು ರೋದಿಸುತ್ತಿದ್ದನು. "ಸತ್ಯಸಂಧ, ಜಿತಕ್ರೋಧ, ವಿಮತ್ಸರ, ಜಗತ್ಪ್ರಿಯ, ಗುರುಶುಶ್ರೂಷಣರತ! ನನಗೆ ಪ್ರತಿವಚನ ವನ್ನು ಕೊಡು. ಅಯ್ಯೋ, ಸರ್ವಜನ ಹೃದಯ ನಯನಾಭಿರಾಮನಾದ ನನ್ನ ರಾಮನೆಲ್ಲಿ ಹೋದನು? ಪಿತೃಭಕ್ತನಾದ ಅವನನ್ನು ಕಾಣದೆ ಹೋದೆನೆ?" ಎಂದು ಪ್ರಲಪಿಸಿದನು. ಅಸ್ತಪರ್ವತವನ್ನು ಸೇರಿದ ಸೂರ್ಯನಂತೆ ರಾಮನು ಹೊರಟುಹೋಗಲು ಅವನೊಡನೆಯೇ ಲಕ್ಷ್ಮಣನು ಹಗಲಿನಂತೆಯೂ ಸೀತೆಯು ನೆರಳಿನಂತೆಯೂ ಕಾಣದೆ ಹೋದರೆಂದೂ ಅವನು ಸಂತಪಿಸಿದನು. ರಾಮನು ತನ್ನ ಮಗನಾಗಿ ಹುಟ್ಟದಿದ್ದಿದ್ದರೆ ಚೆನ್ನಾಗಿರುತ್ತಿದ್ದಿತೆಂದು ಹಲುಬಿದನು.

ಆಗ ಕೈಕೆಯ ಸ್ಮರಣೆ ಬಂದು ದಶರಥನಿಗೆ ಅವಳಲ್ಲಿ ಕೋಪ ರೋಷಗಳು ಉಕ್ಕೇರಿದುವು. ಕೌಸಲ್ಯೆಯಲ್ಲಿ ನಿರ್ವ್ಯಾಜವಾದ ಪ್ರೇಮ ಮೈತ್ರಿಗಳು ನೆಲಸಿದವು. ರಾಮಜನನಿಯಾದ ಆಕೆಯ ಸ್ಪರ್ಶವೇ ತನಗೆ ಆ ಸಮಯದಲ್ಲಿ ನಿರ್ವೃತಿಯೆಂದು ತಿಳಿದನು. ಅಂತು, ರಾಮಲಕ್ಷ್ಮಣ ಸೀತೆಯರನ್ನಗಲಿದ ಅವನ ಸ್ಥಿತಿಯು ಅವರ್ಣನೀಯವಾಯಿತು.

ಹೀಗೆ ದಶರಥ ಮಹಾರಾಜನು ದುರ್ಭರವಾದ ಶೋಕಸಾಗರದಲ್ಲಿ ಮುಳುಗಿ ಮೈಮರೆತಿರುವ ಸಮಯದಲ್ಲಿ ಸುಮಂತ್ರನು ವನದಿಂದ ಹಿಂತಿರುಗಿದನೆಂಬ ಸುದ್ದಿಯು ದೌವಾರಿಕನಿಂದ ಅವನಿಗೆ ತಿಳಿಯಿತು. ಸುಮಂತ್ರನು ಶೂನ್ಯರಥಸಹಿತನಾಗಿ ಬಂದನೆಂದು ತಿಳಿಯುತ್ತಲೇ

ಮಹಾರಾಜನು ತನ್ನ ಮನೋರಥವೂ ಭಗ್ನವಾಯಿತೆಂದು ನಿರ್ಧರಿ
ಬಿಟ್ಟನು. ಆ ಸಮಯದಲ್ಲಿ ಸುಮಂತ್ರನು ಆತನನ್ನು ಸಂದರ್ಶಿಸಿದನ
"ಪ್ರಭುವೇ, ರಾಮ ಲಕ್ಷ್ಮಣ ಸೀತೆಯರು ಶೃಂಗಿಬೇರಪುರವನ್ನು ಸೇ
ಅಲ್ಲಿಯೇ ನಿಂತು ನಿನ್ನನ್ನು ಅಭಿವಂದಿಸಿ, ಅಯೋಧ್ಯಾಭಿಮುಖರಾ
ನಿಂತು ಏನನ್ನೊ ಹೇಳಲು ಯತ್ನಿಸಿದರು. ಆದರೆ ಕಂಬನಿದುಂಬಿ ಕಂಠ
ಗದ್ಗದವಾಗಲು ಏನೂ ಹೇಳದೆಯೇ ಮುಂದಕ್ಕೆ ಹೊರಟುಹೋದರು
ಎಂದು ಅರಿಕೆಮಾಡಿದನು. ದಶರಥನಿಗೆ ಸಿಡಿಲು ಬಡಿದಂತಾಯಿತ
ಕೈಕೆಯಿಂದ ಅಂತಹ ದಾರುಣ ಸನ್ನಿವೇಶವು ಪ್ರಾಪ್ತವಾದುದನ್ನು ನೆನೆ
ಅವನ ಹೃದಯವೇ ದುಃಖದಿಂದ ಕಲಕಿಹೋಯಿತು; "ಸುಮಂತ್ರ
ಕೈಕೆಗೆ ತಿಳಿಸು: 'ರಾಮನು ಹೊರಟುಹೋದನು. ನಿನ್ನ ಇಷ್ಟಾರ್ಥ
ಗಳೆಲ್ಲವೂ ಈಡೇರಲಿ. ನಾನೂ ಜೀವಿತವನ್ನುಳಿದು ಹೊರಟುಹೋ
ವೆನು. ನಿನ್ನ ಮಗನನ್ನು ಬೇಗನೆ ಕರೆಯಿಸಿಕೊ. ನೀನೆಸಗಿದ ಪಾಪಕೃ
ಗಳೆಲ್ಲವೂ ಸಫಲವಾಗಲಿ' ಎಂದು" ಎಂದನು.

ಬಹುಕಾಲದಿಂದಲೂ ಹಿರಿಮಗನಾದ ರಾಮನಿಗೆ ರಾಜ್ಯಭಾರವ
ವಹಿಸಿಕೊಟ್ಟು, ಸಮರ್ಥನಾದ ನರಪತಿಯ ಲಾಭದಿಂದ ಪ್ರಜೆಗಳೆಲ್ಲರನ
ಕೃತಕೃತ್ಯರನ್ನಾಗಿಸಿ ಆನಂದಪಡಬೇಕೆಂದಿದ್ದ ಅವನ ಮನೋರಥಗಳೆಲ್ಲ
ಕುಸಿದು ಬಿದ್ದುಹೋದುವು. ಒಮ್ಮೆಲೇ ತಡೆಯಲಾರದಷ್ಟು ದುಃ
ವಾಗಿ, ಹೃದಯವೇ ಒಡೆದುಹೋಗುವಂತಾಯಿತು. ಆ ಹೊತ್ತಿ
ಸರಿಯಾಗಿ ಪಿತೃಗಳಾದ ದಿಲೀಪಾದಿಗಳು ಅವನ ಕಣ್ಣಿಗೆ ಕಾಣ
ದಂತಾಗಿ, ತನಗೂ ಅವರೊಡನಿರುವ ಸಮಯವು ಸನ್ನಿಹಿತವಾಯಿತೆಂ
ತೋರಿತು. ಪುತ್ರವಿರಹ ಶೋಕವು ತಾನೇತಾನಾಗಿ ಆವರಿಸಿ ನಿಲ್ಲಲ
ಮತ್ತೊಮ್ಮೆ ರಾಮ ಲಕ್ಷ್ಮಣ ಸೀತೆಯರನ್ನು ಸ್ಮರಿಸುತ್ತ ಅವನು ದೀರ್ಘ
ಮೂರ್ಛೆಗೆ ಸಂದನು.

ಮಹಾರಾಜ ದಶರಥನು ಗತಿಸಿದಮೇಲೆ ಅವನ ಅಪ್ಪಣೆ
ಮೇರೆಗೆ ಭರತನನ್ನು ಕರೆತರಲು, ಸುಮಂತ್ರನ ಪ್ರೇರಣೆಯಂತೆ ದೂತ
ಕೇಕಯ ರಾಜಧಾನಿಗೆ ಹೋದರು. ಭರತನು ಬಹಳಕಾಲದಿಂದ
ಮಾತುಲನ ಮನೆಯಲ್ಲಿಯೇ ಇದ್ದುದರಿಂದ ಅಯೋಧ್ಯೆಯ ಯಾ

ಸಮಾಚಾರವೂ ಅವನಿಗೆ ತಿಳಿದಿರಲಿಲ್ಲ. ಸಮಾಚಾರವನ್ನು ತಂದು ಹೇಳಿದ ದೂತರೂ ಸಹ, ಮಹಾರಾಜನು ವ್ಯಾಧಿಪೀಡಿತನಾಗಿ ಸಂತಪಿಸು ತ್ತಿರುವನೆಂದು ಮಾತ್ರ ತಿಳಿಸಿ, ಕೂಡಲೆ ಬಿಜಮಾಡಬೇಕೆಂದು ಅರಿಕೆ ಮಾಡಿದರು. ಪಿತೃವತ್ಸಲನಾದ ಭರತನು ಆ ಸುದ್ದಿಯನ್ನು ಕೇಳಿದೊಡ ನೆಯೇ ಮಾತುಲನ ಅನುಜ್ಞೆಯನ್ನು ಪಡೆದು ಅಯೋಧ್ಯೆಗೆ ಹೊರಟನು.

ಬರುತ್ತ ದಾರಿಯಲ್ಲಿ ಭರತನು ತನ್ನ ತಂದೆಯ ವಿಚಾರವನ್ನೇ ಯೋಚಿಸುತ್ತಿದ್ದನು. ಅಷ್ಟು ಬೇಗನೆ ತನ್ನನ್ನು ಕರೆಯಿಸಿಕೊಳ್ಳಬೇಕಾದರೆ, ಆತನ ವ್ಯಾಧಿಯು ಎಂತಹದೆಂಬುದು ಅವನಿಗೆ ಸಂದೇಹಕ್ಕಿಟ್ಟು ಕೊಂಡಿತು. ಸೂತನನ್ನು ಕೇಳಲು, ಆ ವ್ಯಾಧಿಯು ಅಪರಿಮಿತವಾದ ಹೃದಯಪರಿತಾಪವೆಂದೂ, ನಿರಾಹಾರನಾಗಿ ನೆಲಹಿಡಿದು ಮಲಗಿರುವ ನೆಂದೂ, ದೈವವೇ ಕಾಪಾಡಬೇಕೆಂದೂ ಹೇಳಿಬಿಟ್ಟನು. ಭರತನ ಹೃದಯವು ತಲ್ಲಣಿಸಿಹೋಯಿತು. ರಥವನ್ನು ಮತ್ತಷ್ಟು ವೇಗವಾಗಿ ತರುಬೆಂದು ಸೂತನಿಗೆ ಆಜ್ಞೆಮಾಡಿದನು. ರಥವು ವೇಗವೇಗವಾಗಿ ಚಲಿಸಿದಂತೆಲ್ಲ, ಅಯೋಧ್ಯೆಯನ್ನು ಸೇರಿ ಬಂಧುಜನರನ್ನು ಕಾಣಬೇಕೆಂಬ ಕುತೂಹಲದಿಂದ ಭರತನ ಮನಸ್ಸು ಮತ್ತಷ್ಟು ವೇಗವಾಗಿ ಅತ್ತ ಕಡೆ ಚಲಿಸಿತು. ತಾನು ಅಯೋಧ್ಯೆಯನ್ನು ಸೇರಿ ತಂದೆಯ ಅಡಿಗೆರಗುವುದು, ತಂದೆ ತನ್ನನ್ನು ಪ್ರೀತಿಯಿಂದ ಅಪ್ಪಿಕೊಳ್ಳುವುದು, ಅಣ್ಣ ತಮ್ಮಂದಿ ರೆಲ್ಲರೂ ತನ್ನನ್ನು ಕಾಣುವ ಸಂಭ್ರಮದಿಂದ ತ್ವರಿತವಾಗಿ ಬರುವುದು, ತಾಯಂದಿರು ಆನಂದಬಾಷ್ಪಗಳನ್ನು ಸುರಿಸುತ್ತ ತನ್ನನ್ನು ಎದುರುಗೊಳ್ಳು ವುದು—ಮೊದಲಾದ ಸವಿಗನಸುಗಳನ್ನು ಕಾಣುತ್ತ ಅವನ ಮನಸ್ಸು ಉತ್ಸಾಹಪೂರಿತವಾಯಿತು.

ಭರತನ ಉತ್ಸಾಹವನ್ನು ನೋಡಿ ಸೂತನು, ಮಹಾರಾಜನ ವಿನಾಶ ವನ್ನರಿಯದ ಅವನು ಮುಂದೆ ದುಃಖಕಾರಣಗಳಾಗುವ ಬಯಕೆಗಳನ್ನು ಬಯಸುತ್ತ ಅಯೋಧ್ಯೆಯನ್ನು ಪ್ರವೇಶಿಸುತ್ತಿರುವನೆಂದು ತನ್ನಲ್ಲಿಯೇ ದುಃಖಿಸಿದನು. ಮಹಾರಾಜನ ವಿಚಾರವನ್ನಾದರೂ ಅವನಿಗೆ ಅರಿಕೆ ಮಾಡೋಣವೆಂದರೆ ಅದು ಅವನಿಂದ ಸಾಧ್ಯವಾಗಲಿಲ್ಲ. ತಂದೆಯ ಪ್ರಾಣಪರಿತ್ಯಾಗ, ತಾಯಿಯ ಐಶ್ವರ್ಯಲೋಭ, ಜ್ಯೇಷ್ಠಭ್ರಾತೃವಿನ

ವಿಪ್ರವಾಸ—ಈ ಮೂರು ದೋಷಗಳನ್ನು ಯಾವನು ತಾನೇ ಹೇಳಲು ಸಾಧ್ಯವಾದೀತೆಂದು ಸೂತನು ಸುಮ್ಮನಾಗಿಬಿಟ್ಟನು.

ಅಯೋಧ್ಯೆಯು ಸಮಿಾಪಿಸಿತು. ಭರತನು ಪಟ್ಟಣವನ್ನು ಪ್ರವೇಶಿಸುವುದರಲ್ಲಿರಲು ಭಟನೊಬ್ಬನು ಬಂದು, ಅವನನ್ನು ಸಂದರ್ಶಿಸಿದನು. ಶತ್ರುಘ್ನನು ತನ್ನನ್ನು ಎದುರುಗೊಳ್ಳಲು ಬರುತ್ತಿರುವ ಸುದ್ದಿಯನ್ನು ಹೇಳಲು ಆ ಭಟನು ಬಂದಿರುವುದಾಗಿ ಭರತನು ಭಾವಿಸಿದನು. ಆದರೆ ಅವನು ವಸಿಷ್ಠರ ಆಜ್ಞೆಯನ್ನು ತಿಳಿಸಲು ಬಂದಿದ್ದನು. ಕೃತ್ತಿಕಾ ನಕ್ಷತ್ರವು ಸ್ವಲ್ಪ ಉಳಿದಿರುವುದೆಂದೂ, ರೋಹಿಣೀ ನಕ್ಷತ್ರವು ಬಂದ ಮೇಲೆ ಭರತನು ಅಯೋಧ್ಯೆಯನ್ನು ಪ್ರವೇಶಿಸಬೇಕೆಂದೂ ವಸಿಷ್ಠರ ಸಂದೇಶವಾಗಿದ್ದಿತು.

ಗುರುವಚನವನ್ನು ಪುರಸ್ಕರಿಸಿ ಭರತನು ಅಲ್ಲಿಯೇ ವಿಶ್ರಮಿಸಿಕೊಳ್ಳ ಬಯಸಿದನು. ಸುತ್ತಲೂ ನೋಡಿ, ತೋಪಿನ ನಡುವೆ ದೇವಕುಲವೊಂದು ಕಾಣಿಸಲು ಅಲ್ಲಿ ವಿಶ್ರಮಿಸಿಕೊಳ್ಳೋಣವೆಂದು ಹೋದನು. ದೈವತ ಪೂಜೆ, ವಿಶ್ರಾಂತಿ ಎರಡೂ ಲಭಿಸುತ್ತವೆಯೆಂದೂ ಪುರಪ್ರವೇಶ ಮಾಡುವ ಮೊದಲು ಸ್ವಲ್ಪ ಕುಳಿತು ಆಮೇಲೆ ಪ್ರವೇಶಿಸಬಹುದೆಂದೂ ಅವನು ಆ ದೇವಕುಲದ ಬಳಿ ಸಾರಿದನು. ಇಕ್ಷ್ವಾಕು ವಂಶದಲ್ಲಿ ಜನಿಸಿ ಕೀರ್ತಿ ಶರೀರಿಗಳಾದ ರಾಯರ ಪ್ರತಿಮೆಗಳನ್ನು ಸ್ಥಾಪಿಸಿ ಪೂಜಿಸುತ್ತಿದ್ದ ದೇವಕುಲವೇ ಅದು. ಅಪ್ರೊತ್ತು ಕೌಸಲ್ಯೆಯೇ ಮೊದಲಾದ ಅಂತಃಪುರದ ಜನರು ಅಲ್ಲಿ ನೂತನವಾಗಿ ಪ್ರತಿಷ್ಠಿಸಿರುವ ದಶರಥನ ಪ್ರತಿಮೆಯನ್ನು ಸಂದರ್ಶಿಸಲೋಸುಗ ಅಲ್ಲಿಗೆ ಬರುವವರಾಗಿದ್ದರು.

ದೇವಕುಲವನ್ನು ನೋಡುತ್ತಲೆ ಭರತನಿಗೆ ಆಶ್ಚರ್ಯವಾಯಿತು. ಅದು ಯಾವ ದೇವತೆಯದೆಂದು ಅವನಿಗೆ ಸಂದೇಹವಾಯಿತು. ಇಂತಹ ದೇವತೆಯದೆಂದು ಗುರುತು ಕಾಣುವಂತೆ ಆಯುಧವಾಗಲಿ ಧ್ವಜವಾಗಲಿ ಹೊರಗೆ ಕಾಣಿಸಲಿಲ್ಲ. ಇದರ ಮೇಲಾಗಿ, ಪಾರ್ವಣಗಳನ್ನು ಬೇರೆ ಅಲ್ಲಿಟ್ಟಿದ್ದರು. ಅವನು ಒಳಗೆ ಹೋಗಿ, ಮಾನವರನ್ನು ಹೋಲುತ್ತಿರುವ ಶಿಲಾಪ್ರತಿಮೆಗಳನ್ನು ಕಂಡು ಮತ್ತಷ್ಟು ವಿಸ್ಮಿತನಾದನು. ಆದರಲ್ಲಿಯೂ ಅಲ್ಲಿದ್ದ ನಾಲ್ಕು ಪ್ರತಿಮೆಗಳನ್ನು ಕಂಡು ಅವು ಇಂಥವರವೆಂದು ಗುರುತು

ತಿಳಿಯದಿದ್ದರೂ ಅವನ್ನು ನೋಡಿದುದರಿಂದ ತನ್ನಲ್ಲಿ ಹರ್ಷವು ಮೂಡಲು, ಅವಕ್ಕೆ ಮಣಿಯುವುದರಲ್ಲಿದ್ದನು.

ಅಷ್ಟರಲ್ಲಿ ದೇವಕುಲಿಕನು ಪ್ರವೇಶಿಸಿ, ಅಲ್ಲಿರುವ ಪ್ರತಿಮೆಗಳು ಕ್ಷತ್ರಿಯರವೆಂದೂ ದ್ವಿಜರು ಅವಕ್ಕೆ ಮಣಿಯಕೂಡದೆಂದೂ ತಡೆದನು. ಕ್ಷತ್ರಿಯರ ಪ್ರತಿಮೆಗಳೆಂದು ಗೊತ್ತಾದಮೇಲೆ ಭರತನಿಗೆ ಯಾರವೆಂದು ತಿಳಿದುಕೊಳ್ಳುವ ಕುತೂಹಲವಾಯಿತು, ಕೇಳಿದನು. ದೇವಕುಲಿಕನು, ಆಳಿದ ಇಕ್ಷ್ವಾಕುರಾಯರ ಪ್ರತಿಮೆಗಳು ಅವೆಂದು ಹೇಳಿದನು.

ಭರತನ ಆನಂದಕ್ಕೆ ಪಾರವಿಲ್ಲವಾಯಿತು. ಅಲ್ಲಿ ಸ್ಥಾಪಿತವಾಗಿದ್ದ ಪ್ರತಿಯೊಂದು ಶಿಲಾಪ್ರತಿಮೆಯೂ ಅಯೋಧ್ಯೆಯನ್ನಾಳಿದ ಒಬ್ಬೊಬ್ಬ ಅರಸನದು; ಪ್ರತಿಯೊಬ್ಬ ಅರಸನೂ ಅಸುರಪುರವಧೆಯಲ್ಲಿ ದೇವತೆಗಳಿಗೆ ಸಹಾಯಕನಾಗಿದ್ದವನು; ಸ್ವಸುಕೃತದಿಂದ ಜನಪದಸಹಿತವಾಗಿ ಶಕ್ರಲೋಕವನ್ನು ಹೊಂದಿದವನು; ಸ್ವಭುಜಬಲದಿಂದ ಗೆದ್ದ ಅಖಂಡ ವಸುಮತಿಯನ್ನು ನಿರಾತಂಕವಾಗಿ ಆಳಿದವನು. ಇಂತಹ ಪ್ರತಿಯೊಬ್ಬರೂ ಸ್ವರ್ಗಲೋಕವನ್ನು ಸೇರಿ ಇಲ್ಲಿ ಪ್ರತಿಮಾರೂಪವಾಗಿ ಬೆಳಗುತ್ತಿದ್ದಾರೆ.

ಭರತನಿಗೆ ಆ ಪ್ರತಿಮೆಗಳು ಯಾರಯಾರವೆಂದು ತಿಳಿಯಲು ಕುತೂಹಲ; ಮತ್ತೆ ಪ್ರಶ್ನಿಸಿದನು. ದಿಲೀಪ, ರಘು, ಅಜರ ಪ್ರತಿಮೆಗಳನ್ನು ದೇವಕುಲಿಕನು ಭರತನಿಗೆ ಪರಿಚಯಮಾಡಿಕೊಟ್ಟನು. ಭರತನು ಭಕ್ತಿಯಿಂದ ಆ ಪ್ರತಿಮೆಗಳಿಗೆ ನಮಸ್ಕರಿಸಿ ನಾಲ್ಕನೆಯ ಪ್ರತಿಮೆಯನ್ನು ಕಂಡು ಸ್ತಂಭಿತನಾದನು. ಅದು ತಂದೆಯಾದ ದಶರಥನದಾಗಿದ್ದಿತು. ಭರತನಿಗೆ ಆವರೆಗೂ ದಶರಥನು ಮೃತಿಹೊಂದಿದ ವಾರ್ತೆಯು ತಿಳಿದಿರಲಿಲ್ಲ. ಈಗ ಆತನ ಪ್ರತಿಮೆಯು ಅಲ್ಲಿ ಸ್ಥಾಪಿತವಾಗಿದ್ದುದನ್ನು ಕಂಡು ಸಂಶಯವಾಯಿತು. ಬದುಕಿರುವವರ ಪ್ರತಿಮೆಗಳನ್ನೂ ಇಲ್ಲಿ ಸ್ಥಾಪಿಸುತ್ತಾರೆಯೇ ಎಂದು ದೇವಕುಲಿಕನನ್ನು ಪ್ರಶ್ನಿಸಿದನು. ದೇವಕುಲಿಕನು, ಅತಿಕ್ರಾಂತರಾದವರ ಪ್ರತಿಮೆಗಳನ್ನು ಮಾತ್ರ ಇಲ್ಲಿ ಸ್ಥಾಪಿಸುವರು ಎಂದು ಹೇಳಿದ ಮೇಲೆ ಅವನಿಗೆ ವಿಷಯವು ಮನವರಿಕೆಯಾಗಿ ದುಃಖವು ಉಕ್ಕಿಬಂದಿತು. ದೇವಕುಲಿಕನು ಸ್ತ್ರೀಶುಲ್ಕಾರ್ಥವಾಗಿ ಪ್ರಾಣವನ್ನೂ ರಾಜ್ಯವನ್ನೂ ತೊರೆದ ದಶರಥನ ಪ್ರತಿಮೆಯ ವಿಚಾರವಾಗಿ ಪ್ರಶ್ನಿಸಲಿಲ್ಲವೇಕೆಂದು

ಕೇಳಿದಮೇಲಂತೂ ಭರತನು ದುಃಖಭರವನ್ನು ತಾಳಲಾರದೆ ಮೂರ್ಛಿತನಾದನು. ಸ್ತ್ರೀ ಶುಲ್ಕವೆಂಬ ಶಬ್ದವು ಅವನ ಕಿವಿಗೆ ಬೀಳುತ್ತಲೆ ತನ್ನ ತಾಯಿಯಿಂದಲೇ ಇಷ್ಟು ಅನಾಹುತವೂ ಸಂಭವಿಸಿರಬೇಕೆಂದು ಅವನಿಗೆ ಅರಿವಾಯಿತು. ದೇವಕುಲಿಕನು ಅವನ ಧ್ವನಿಯಿಂದಲೂ, ಆಕಾರದಿಂದಲೂ, ಮಾತಿನ ರೀತಿಯಿಂದಲೂ ಅವನು ಭರತನೆಂದೇ ನಿರ್ಧರಿಸಿ, ನಡೆದ ವೃತ್ತಾಂತವೆಲ್ಲವನ್ನೂ ಅವನಿಗೆ ತಿಳಿಸಿದನು. ರಾಮನು ಸೀತಾ ಲಕ್ಷ್ಮಣ ಸಹಿತನಾಗಿ ಅಡವಿಗೆ ಹೋದನೆಂಬ ಸುದ್ದಿಯನ್ನು ಕೇಳಿ ಭರತನ ಹೃದಯವೇ ಕಲಕಿಹೋಯಿತು. ಆ ದುಃಖಭರದಿಂದ ಮತ್ತೆ ಮೂರ್ಛೆ ಹೊಂದಿದನು.

ಆ ಸಮಯಕ್ಕೆ ಸರಿಯಾಗಿ ಕೌಸಲ್ಯಾ ಸುಮಿತ್ರೆಯರೂ ಕೈಕೆಯೂ ಸುಮಂತ್ರನನ್ನು ಮುಂದಿಟ್ಟುಕೊಂಡು ದೇವಕುಲಕ್ಕೆ ಬಂದರು. ಸುಮಂತ್ರನು, ಯುವಕನಾಗಿದ್ದಾಗ ದಶರಥ ಮಹಾರಾಜನನ್ನು ಹೋಲುತ್ತಿದ್ದ ಯಾವನೋ ಒಬ್ಬನು ದೇವಕುಲದಲ್ಲಿ ಬಿದ್ದಿರುವುದನ್ನು ಕಂಡು ವಿಸ್ಮಿತನಾದನು. ಆಗ ದೇವಕುಲಿಕನು, ಅವನು ಮತ್ತಾರೂ ಅಲ್ಲವೆಂದೂ ಭರತನೆಂದೂ ಅರಿಕೆಮಾಡಿದನು. ರಾಣಿಯರೆಲ್ಲರೂ ಕೂಡಲೆ ಬಳಿಸಾರಿ, ಅವನನ್ನು ಸಂತಯಿಸಬಯಸಿದರು. ಅಷ್ಟರಲ್ಲಿಯೇ ಭರತನಿಗೂ ಎಚ್ಚರವಾಗಿ, ಸುಮಂತ್ರನನ್ನೂ ತನ್ನ ತಾಯಿಯರನ್ನೂ ಕಂಡನು; ಅವರ ಅವಸ್ಥೆ ಹಾಗಾಗಿದ್ದುದನ್ನು ನೋಡಿ ಅವನು ಮತ್ತೆ ದುಃಖಾಕ್ರಾಂತನಾದನು. ಸುಮಂತ್ರನು ಕೌಸಲ್ಯಾ ಸುಮಿತ್ರೆಯರ ಪರಿಚಯ ಮಾಡಿಕೊಡಲು, ಭರತನು ಭಕ್ತಿಯಿಂದ ಅವರಿಗೆ ನಮಸ್ಕಾರ ಮಾಡಿದನು; ತನ್ನ ತಾಯಿಯನ್ನು ನೋಡಿ, ಪಾಪಿಷ್ಠೆಯಾದ ಅವಳು ಗಂಗಾಯಮುನಾ ನದಿಗಳ ನಡುವೆ ಪ್ರವೇಶಿಸಿದ ಕುನದಿಯಂತೆ ತಾಯಿಯರಾದ ಕೌಸಲ್ಯಾ ಸುಮಿತ್ರೆಯರ ನಡುವೆ ಶೋಭಿಸುವುದಿಲ್ಲವೆಂದು ಹೀಯಾಳಿಸಿದನು. ತನ್ನನ್ನು ಹಾಗೆ ಹೀಯಾಳಿಸಲು ತಾನು ಮಾಡಿದ ಅಪರಾಧವೇನೆಂದು ಕೈಕೆ ಕೇಳಿದಳು. ಅದಕ್ಕೆ ಉತ್ತರವಾಗಿ ಭರತನು ತನ್ನನ್ನು ಅಪಕೀರ್ತಿಗೆ ಗುರಿಮಾಡಿದುದು, ತನ್ನ ಅಣ್ಣನಾದ ರಾಮನಿಗೆ ನಾರುಡೆ ಯುಡಿಸಿದುದು, ಮಹಾರಾಜನನ್ನು ಗೃಹಮೃತ್ಯುವಿಗೆ ತುತ್ತಾಗಿಸಿದುದು,

ಅಯೋಧ್ಯಾ ಜನರೆಲ್ಲರನ್ನೂ ದುಃಖಕ್ಕೀಡುಮಾಡಿದುದು, ಲಕ್ಷ್ಮಣನನ್ನು ಮೃಗಗಳೊಡಗೂಡಿಸಿದುದು, ಪುತ್ರವತ್ಸಲೆಯರಾದ ಕೌಸಲ್ಯಾ ಸುಮಿತ್ರೆಯರನ್ನು ಶೋಕಭಾಗಿನಿಯರನ್ನಾಗಿಸಿದುದು, ಸೊಸೆಯಾದ ಸೀತೆಯನ್ನು ಕಾಡುದಾರಿ ನಡೆವ ಪರಿಶ್ರಮದ ಪೀಡೆಗೆ ಒಳಗಾಗಿಸಿದುದು, ಇಷ್ಟರ ಜೊತೆಗೆ ತನ್ನನ್ನು ಲೋಕವೆಲ್ಲವೂ ಧಿಕ್ಕರಿಸುವಂತೆ ಮಾಡಿಕೊಂಡುದು— ಮೊದಲಾದ ಈ ಎಲ್ಲ ಅಪರಾಧಗಳನ್ನು ವಿವರಿಸಿ ಹೇಳಿ, ಮತ್ತೆ ಮತ್ತೆ ಬಹಳ ಕ್ರೂರವಾಗಿ ಅವಹೇಳನಮಾಡಿದನು. ಆಗ ಕೌಸಲ್ಯೆ "ಮಗೂ, ಮರ್ಯಾದೆಯನ್ನು ತಿಳಿದ ನೀನು ತಾಯಿಗೆ ನಮಸ್ಕರಿಸುವುದಿಲ್ಲವೇಕೆ?" ಎನ್ನಲು, "ಅಮ್ಮ, ನೀನೇ ನನ್ನ ತಾಯಿ. ಇದೋ ಮತ್ತೊಮ್ಮೆ ನಮಸ್ಕರಿಸುತ್ತೇನೆ" ಎಂದನು. ಕೈಕೆ ಮುನ್ನ ತನ್ನ ತಾಯಿಯಾಗಿದ್ದಳೆಂದೂ, ಈಗ ಅಲ್ಲವೆಂದೂ ಹೇಳಿ, ಲೋಕದಲ್ಲಿ ಯಾವ ಹೆಂಗಸು ಭರ್ತೃದ್ರೋಹಮಾಡುವಳೋ ಅವಳು ತಾಯಿಯಾಗಿದ್ದರೂ ತಾಯಿ ಅಲ್ಲದೆಹೋಗಲೆಂದು ಅವಳನ್ನು ಮತ್ತೆ ಹಳಿದನು.

ಕೈಕೆ ಬಹಳ ದುಃಖಿತೆಯಾಗಿ, ತಾನು ಮಹಾರಾಜನ ಸತ್ಯವಚನವನ್ನು ಕಾಪಾಡಲೋಸುಗ ಆ ರೀತಿ ಮಾಡಬೇಕಾಯಿತೆಂದು ಸಮಾಧಾನ ಹೇಳಿದಳು. ರಾಮನೂ ತಾನೂ ಇಬ್ಬರೂ ಮಕ್ಕಳಾಗಿರುವಲ್ಲಿ ಜ್ಯೇಷ್ಠಾನುಕ್ರಮದಿಂದ ಅಭಿಷೇಕವನ್ನು ಹೊಂದಬೇಕಾಗಿದ್ದ ರಾಮನನ್ನು ಕಾಡಿಗೆ ಅಟ್ಟಿದುದು ತೀರಾ ಅನುಚಿತವೆಂದೂ ಪ್ರಜೆಗಳಿಗೆ ಅತ್ಯಂತ ಹಿತಕರವಾದ ಆ ಕಾರ್ಯಕ್ಕೆ ವಿಘ್ನವನ್ನು ತಂದೊಡ್ಡಿದುದು ಮಹಾಪರಾಧವೆಂದೂ ಭರತನು ಮೂದಲಿಸಿದನು. ಕೈಕೆ ಆ ವಿಷಯದಲ್ಲಿ ತನ್ನ ಅಪರಾಧವೇನೂ ಇಲ್ಲವೆಂದೂ ತನ್ನನ್ನು ಶುಲ್ಕಲುಬ್ಧೆಯನ್ನಾಗಿಸಿದ ತನ್ನ ಅಣ್ಣನನ್ನು ನಿಂದಿಸಬೇಕೆಂದೂ ಹೇಳಿದಳು. "ಶುಲ್ಕಲುಬ್ಧೆಯಾದರೂ ಅದರಲ್ಲಿ ರಾಮನ ವನವಾಸವೂ ಸೇರಿದ್ದಿತೆ? ಒಂದು ವೇಳೆ ರಾಜ್ಯಲುಬ್ಧೆಯಾಗಿದ್ದರೂ ನನ್ನ ಹೆಸರನ್ನು ಹೇಳಿ ನನಗೂ ಅಪಕೀರ್ತಿಯನ್ನು ತರಬೇಕೆ?" ಎಂದು ಭರತನು ಮತ್ತೆ ಮತ್ತೆ ಚುಚ್ಚಿ ಮಾತನಾಡಿದನು. ಕೈಕೆ ಎಲ್ಲ ವಿಚಾರಗಳನ್ನೂ ಸಮಯಬಂದಾಗ ತಿಳಿಸುವುದಾಗಿ ಹೇಳಿ ಸುಮ್ಮನಾದಳು.

ಆ ಹೊತ್ತಿಗೆ ಸರಿಯಾಗಿ ಸುಮಂತ್ರನು, ಅಭಿಷೇಕವನ್ನು ಪುರಸ್ಕರಿಸಿ ವಸಿಷ್ಠ ವಾಮದೇವರು ಕಾಣಲು ಬಂದಿರುವುದಾಗಿ ಭರತನಿಗೆ ತಿಳಿಸಿದನು. ಗೋವಳನ ಕಾಪಿಲ್ಲದ ಗೋವುಗಳು ಅಳಿಯುವಂತೆ ದೊರೆಯಿಲ್ಲದ ಪ್ರಜೆಗಳೆಲ್ಲರೂ ಅಳಿಯುವಂತಾಗುವುದೆಂದು ಹೇಳಿಕಳುಹಿಸಿದ್ದ ಅವರ ಸಂದೇಶವನ್ನು ಸುಮಂತ್ರನು ಅರಿಕೆಮಾಡಿದನು. ಭ್ರಾತೃವತ್ಸಲನಾದ ಭರತನು ಆ ಮಾತನ್ನು ಕಿವಿಗೆ ಹಾಕಿಕೊಳ್ಳದೆ, ಜನಗಳೆಲ್ಲರೂ ತನ್ನೊಡನೆ ಬರಬೇಕೆಂದು ಪ್ರಾರ್ಥಿಸಿದನು. ಸುಮಂತ್ರನು ಅಭಿಷೇಕವನ್ನು ತೊರೆದು ಎಲ್ಲಿಗೆ ಹೋಗುವೆ ಎನ್ನಲು, "ಅಭಿಷೇಕವೆ? ಅದನ್ನು ಈಕೆಗೆ ಕೊಡುವುದಾಗಲಿ" ಎಂದು ಹೇಳಿ, ಲಕ್ಷ್ಮಣಪ್ರಿಯನಾದ ರಾಮನಿರುವೆಡೆಗೆ ತಾನು ಹೋಗುವುದಾಗಿಯೂ, ಅವನಿರುವೆಡೆಯೇ ಅಯೋಧ್ಯೆಯೆಂದೂ, ಅವನನ್ನುಳಿದುದು ಅಯೋಧ್ಯೆಯಲ್ಲವೆಂದೂ ಹೇಳಿ ಹೊರಟನು. ಎಲ್ಲರೂ ಅವನನ್ನು ಹಿಂಬಾಲಿಸಿದರು.

ಹೀಗೆ ಭರತನು ಅಭಿಷೇಕವನ್ನು ತೊರೆದು ಪ್ರಕೃತಿಗಳೆಲ್ಲರೂ ತನ್ನನ್ನು ಅನುಸರಿಸಿ ಬರುತ್ತಿರಲು ರಾಮಚಂದ್ರನ ಸಂದರ್ಶನಾರ್ಥಿಯಾಗಿ ವನವನ್ನು ಪ್ರವೇಶಿಸಿದನು. ರಾಮನು ತನಗೆ ಪೂಜ್ಯನು. ಮಹಾರಾಜ ದಶರಥನ ಪ್ರತಿನಿಧಿ. ಧೀರರಿಗೆ ಉತ್ತಮವಾದ ನಿದರ್ಶನ. ಅಂತಹ ಉದಾತ್ತ ವೀರನು ರಾಜ್ಯಲುಬ್ಧೆಯಾದ ಕೈಕೆಯಿಂದ ತಿರಸ್ಕೃತನಾಗಿದ್ದಾನೆ. ಯಶೋಭಾಗಿಯಾಗಿ, ನರಪತಿ ಪುತ್ರನಾಗಿ, ಸತ್ಯವನ್ನನುಸರಿಸಿ ತನ್ನ ತಾಯಿಗೆ ಮೆಚ್ಚನ್ನುಂಟುಮಾಡಲು ರಾಜ್ಯಲಕ್ಷ್ಮಿಯನ್ನು ವಿಸರ್ಜಿಸಿ ಪ್ರವಾಸಮಾಡಿದ ಅವನು ತನಗೆ ಪರದೈವ. ಅಂತಹವನನ್ನು ಕಾಣುವ ಅಪೇಕ್ಷೆ ಭರತನಲ್ಲಿ ತಾನೇತಾನಾಗಿ ಮೂಡಿದ್ದಿತು.

ಹಾಗೆಯೇ ಮುಂದುವರಿಯುತ್ತ ಆಶ್ರಮವೊಂದು ಗೋಚರವಾಗಲು ಅಲ್ಲಿಯೇ ಸೀತಾರಾಮರೂ ಮಹಾಯಶಸ್ವಿಯಾದ ಲಕ್ಷ್ಮಣನೂ ಆಕಾರ ಪಡೆದ ಸತ್ಯ ಶೀಲ ಭಕ್ತಿಗಳಂತೆ ನೆಲಸಿರುವರೆಂಬುದಾಗಿ ಸುಮಂತ್ರನು ಭರತನಿಗೆ ಅರಿಕೆಮಾಡಿದನು. ಅದನ್ನು ಕೇಳಿದೊಡನೆಯೆ ಭರತನು ರಥದಿಂದಿಳಿದು, ರಾಜ್ಯಲುಬ್ಧೆಯಾದ ಕೈಕೆಯ ಮಗ ಭರತನು ಬಂದಿರುವನೆಂದು ರಾಮನಿಗೆ ಅರಿಕೆಮಾಡೆಂದು ಸುಮಂತ್ರನಿಗೆ ಹೇಳಿದನು.

ಸುಮಂತ್ರನು ಗುರುಜನರಿಗೆ ಅಪವಾದ ತರುವ ಅಂತಹ ಮಾತುಗಳನ್ನು ಅರಿಕೆಮಾಡುವುದು ಸರಿಯಲ್ಲವೆನ್ನಲು, ಇಕ್ಷ್ವಾಕುಕುಲಕಳಂಕಪ್ರಾಯ ನಾದ ಭರತನು ಸಂದರ್ಶನಾರ್ಥಿಯಾಗಿ ಬಂದಿರುವನೆಂದಾದರೂ ಅರಿಕೆ ಮಾಡೆಂದು ಪ್ರಾರ್ಥಿಸಿದನು. ಸುಮಂತ್ರನಿಗೆ ಬಹಳ ದುಃಖವಾಯಿತು. ಹಾಗೆ ಅರಿಕೆಮಾಡಲು ಅವನ ಮನಸ್ಸು ಹಿಂಜರಿಯಿತು,—ಕುಲಭೂಷಣ ನಾದ ಅವನನ್ನು ಕುಲಕಳಂಕನೆಂದು ಹೇಗೆತಾನೆ ಹೇಳುವುದು ? ಭರತನು ಬಂದಿರುವನೆಂದು ಮಾತ್ರ ಅರಿಕೆಮಾಡುವುದಾಗಿ ಅವನು ಹೇಳಿದನು. ಆದರೆ ಅಷ್ಟುಮಾತ್ರದಿಂದ ಭರತನಿಗೆ ತೃಪ್ತಿಯಾಗಲಿಲ್ಲ. ತಾನೊಂದು ಮಹಾಪರಾಧ ಮಾಡಿರುವುದಾಗಿಯೂ, ಅದಕ್ಕೆ ತಕ್ಕ ಪ್ರಾಯಶ್ಚಿತ್ತ ವನ್ನು ತಾನು ಮಾಡಿಕೊಳ್ಳಲೇಬೇಕೆಂಬುದಾಗಿಯೂ, ತಾನು ಮಾಡಿರುವ ಮಹಾಪರಾಧವು ಬ್ರಹ್ಮಹತ್ಯೆಗೆ ಸಮಾನವಾದುದೆಂದೂ ಭಾವಿಸಿದ ಭರತನು ತನ್ನನ್ನು ತಾನೇ ರಾಮನಡಿಗಳಿಗೆ ನಿವೇದಿಸಿಕೊಳ್ಳುವುದಾಗಿ ನಿಶ್ಚಯಿಸಿ, ಪಿತೃವಚನಪರಾಯಣನಾದ ರಾಮನಿಗೆ ನಿವೇದಿಸಬೇಕೆಂದು, "ನಿರ್ಘೃಣನು, ಕೃತಘ್ನನು, ಪ್ರಾಕೃತನು, ಪ್ರಿಯಸಾಹಸನು, ಭಕ್ತಿಮಂತನೂ ಆದಂತಹ ಯಾವನೋ ಒಬ್ಬನು ಬಂದಿರುವನು. ಇರುವುದೇ ? ತೆರಳುವುದೇ ?" ಎಂದು ಗಟ್ಟಿಯಾಗಿ ಕೂಗಿದನು.

ಆಶ್ರಮದಲ್ಲಿದ್ದ ರಾಮನಿಗೆ ಆ ಕೂಗು ಕೇಳಿಸಿತು. ಗಾಂಭೀರ್ಯ ದಿಂದ ಮೇಘನಾದವನ್ನು ಮೀರಿಸಿ, ತನ್ನ ತಂದೆಯ ಕಂಠಸ್ವರವನ್ನು ಹೋಲುವ ಆ ಕೂಗು ಅವನ ಹೃದಯದಲ್ಲಿ ಬಂಧುಶಂಕೆಯನ್ನು ಮೂಡಿಸಿತು. ಅದು ಯಾರ ಧ್ವನಿಯೆಂದು ತಿಳಿದುಬರುವಂತೆ ಅವನು ಲಕ್ಷ್ಮಣನಿಗೆ ಅಪ್ಪಣೆ ಮಾಡಿದನು. ಲಕ್ಷ್ಮಣನು ಹೊರಬಂದು, ಭರತನನ್ನು ನೋಡಿ ಹರ್ಷಪರವಶನಾದನು. ಭರತನೂ, ವಾವೆಯಲ್ಲಿ ಹಿರಿಯನಾದ ಆ ಲಕ್ಷ್ಮಣನನ್ನು ನೋಡುತ್ತಲೇ ಭಕ್ತಿನಮ್ರನಾಗಿ ನಮಸ್ಕರಿಸಿದನು. ಲಕ್ಷ್ಮಣನು ಭರತನನ್ನು ಆಶೀರ್ವದಿಸಿದ ತರುವಾಯ, ಅವನು ಬಂದಿರುವ ಸುದ್ದಿಯನ್ನು ರಾಮನಿಗೆ ತಿಳಿಸಿದನು. ರಾಮನು ಭರತನ ಆಗಮನವನ್ನು ತಿಳಿಯುತ್ತಲೆ ತಂದೆ ದಶರಥನು ಮೃತಿಹೊಂದಿರುವ ನೆಂದೂ ಭ್ರಾತೃಸ್ನೇಹದಿಂದ ಭರತನು ತನ್ನಲ್ಲಿಗೆ ಬಂದಿರುವನೆಂದೂ

ಊಹಿಸಿದನು. ಸತ್ವರಿಸಿ ಕರೆತಾರೆಂದು ಲಕ್ಷ್ಮಣನಿಗೆ ಆಜ್ಞಾಪಿಸಿ, ಅವನು ಹೋಗುತ್ತಿರಲು, "ಲಕ್ಷ್ಮಣ, ತಡೆ. ಜಾನಕಿಯು ಮಾತೃವಾತ್ಸಲ್ಯವನ್ನು ತೋರಿ, ತುಷಾರಪೂರ್ಣವಾದ ಉತ್ಪಲನೇತ್ರಗಳಿಂದ ಆನಂದಬಾಷ್ಪಗಳನ್ನು ಸುರಿಸಿ ಭರತನನ್ನು ಸಂತಯಿಸಿ ಕರೆತರಲಿ" ಎಂದನು. ಜಾನಕಿಯು ಆತನ ಅಪ್ಪಣೆಯಂತೆ ಭರತನನ್ನು ಕರೆತರಲು ಹೊರಕ್ಕೆ ಬಂದಳು.

ಜಾನಕಿಯನ್ನು ನೋಡುತ್ತಲೆ ಭರತನು ಪೂಜ್ಯೆಯಾದ ಆಕೆಯ ಚರಣಗಳಿಗೆರಗಿದನು. ಆಕೆಯು ಹೃತ್ಪೂರ್ವಕವಾಗಿ ಅವನನ್ನು ಹರಸಿ ಭರ್ತನ ಬಳಿಗೆ ಕರೆದೊಯ್ದಳು. ಭರತನನ್ನು ನೋಡಿದೊಡನೆಯೆ ರಾಮನು ಅವನನ್ನು ಗಾಢವಾಗಿ ಆಲಿಂಗಿಸಿ ಅವನ ನಮಸ್ಕಾರವನ್ನು ಕೈಕೊಂಡು ಆಶೀರ್ವದಿಸಿದನು. ಆ ಸಮಯದಲ್ಲಿಯೇ ಸುಮಂತ್ರನೂ ಅಲ್ಲಿಗೆ ಬಂದು ಸೇರಿದನು. ಅವನನ್ನು ಕಂಡೊಡನೆ ರಾಮನಿಗೆ ದುಃಖ ವೊತ್ತಿಬಂದಿತು. ದಶರಥನ ನಿಧನವನ್ನು ಕುರಿತು ಅವನು ಬಹುವಾಗಿ ಪ್ರಲಪಿಸಿದನು. ಸುಮಂತ್ರನು ರಾಮಪ್ರವಾಸವನ್ನೂ, ನರಪತಿ ನಿಧನವನ್ನೂ, ಭರತನ ವಿಷಾದವನ್ನೂ, ಇಕ್ಷ್ವಾಕುಕುಲದ ಅನಾಥಾವಸ್ಥೆಯನ್ನೂ ಕಂಡೂ ಅನುಭವಿಸಿಯೂ ಇರುವ ತನ್ನ ಆಯುಸ್ಸು ಅಪರಾದ್ಧವಾದುದೆಂದು ಹಲುಬಿದನು.

ತರುವಾಯ ರಾಮನು ಮೃತಿಯೊಂದಿದ ತಂದೆಗೆ ಭರತನು ತಂದ ಜಲದಿಂದ ತರ್ಪಣಕ್ರಿಯೆಯನ್ನು ಮಾಡಿ ಮುಗಿಸಿದಮೇಲೆ ಸಹೇತುಕವಾಗಿ ಮೈಥಿಲಿಯನ್ನು ಕುರಿತು, "ಲಕ್ಷ್ಮಣನ ಸೇವೆಯು ವಿಚ್ಛೇದಗೊಂಡಿತಲ್ಲವೆ?" ಎಂದನು. ಆಗ ಜಾನಕಿಯು "ಭರತನೂ ನಿನ್ನ ಸೇವೆ ಮಾಡಬೇಕಾದವನೇ ಅಲ್ಲವೇ?" ಎಂದಳು. ಭರತನಿಗೆ ರಾಮನಾಡಿದ ಆ ಮಾತಿನ ಅರ್ಥವು ಮನವರಿಕೆಯಾಯಿತು. ತಾನು ಜಲವನ್ನು ತಂದುಕೊಟ್ಟುದಕ್ಕೆ ರಾಮನು ಹಾಗೆ ನುಡಿದನೆಂದು ಅವನಿಗೆ ತಿಳಿಯಿತು. "ಆರ್ಯನು ಪ್ರಸನ್ನನಾಗಬೇಕು. ನಾನು ಇಲ್ಲಿ ದೇಹದಿಂದ ನಿಂತು ನಿನ್ನ ಸೇವೆಯನ್ನು ಮಾಡುವೆನು. ಅಲ್ಲಿ ಅಯೋಧ್ಯೆಯಲ್ಲಿ ಕಾರ್ಯತಃ ನಿಲ್ಲುವೆನು. ನಿನ್ನ ರಾಜ್ಯವೆಂಬುದರಿಂದಲೇ ಅದು ಸುರಕ್ಷಿತ

ನಾಗಿರುತ್ತದೆ'' ಎಂದು ಹೇಳಿದನು. ಆಗ ರಾಮನು, ''ವತ್ಸ, ಹಾಗೆ ಹೇಳಬಾರದು. ನಾನು ದರ್ಪದಿಂದಾಗಲಿ, ಭಯದಿಂದಾಗಲಿ, ಮತಿ ವಿಭ್ರಮದಿಂದಾಗಲಿ ವನಕ್ಕೆ ಬಂದಿಲ್ಲ. ತಂದೆಯ ಆಣತಿಯಂತೆ ಬಂದಿರುವೆನು. ಮಗು, ನಮ್ಮ ಕುಲವು ಸತ್ಯಧನವಾದದ್ದು. ಇದನ್ನು ನಿನಗೆ ಒತ್ತಿಹೇಳುತ್ತೇನೆ. ಅಂಥ ಕುಲದಲ್ಲಿ ಹುಟ್ಟಿದ ನೀನು ನೀಚವಾದ ಮಾರ್ಗದಲ್ಲಿ ಪ್ರವರ್ತಿಸಬಾರದು'' ಎಂದು ಭರತನನ್ನು ಸಮಾಧಾನ ಗೊಳಿಸಲು ಯತ್ನಿಸಿದನು. ಧರ್ಮಯುಕ್ತವಾದ ರಾಮನ ಮಾತುಗಳನ್ನು ಕೇಳಿದ ಕೂಡಲೆ ಸುಮಂತ್ರನು, ''ಪ್ರಭು, ಅಭಿಷೇಕವು ಯಾರಿಗಾಗ ಬೇಕು ?'' ಎಂದು ಕೇಳಿದನು. ''ತಾಯಿ ಕೈಕೇಯಿ ಯಾರಿಗೆ ಅಭಿಷೇಕ ವಾಗಬೇಕೆಂದು ಬಯಸಿದಳೋ ಅವರಿಗೇ ಆಗತಕ್ಕದ್ದು'' ಎಂದು ರಾಮನು ನುಡಿದನು. ಆ ಮಾತು ಭರತನಿಗೆ ಸಹ್ಯವಾಗಲಿಲ್ಲ. ರಾಮನು ನೊಂದಿರುವ ತನ್ನನ್ನು ನೋಯಿಸುತ್ತಿರುವನೆಂದು ಅವನಿಗೆ ಭಾಸ ವಾಯಿತು. ''ಆರ್ಯನು ಪ್ರಸನ್ನನಾಗಬೇಕು. ಹುಣ್ಣಿನಮೇಲೆ ಹೊಡೆಯುವುದು ಯುಕ್ತವಲ್ಲ. ಗುಣಾಢ್ಯನಾದ ನೀನು ಯಾವ ಕುಲದಲ್ಲಿ ಜನ್ಮಿಸಿರುವೆಯೋ ಅದೇ ಕುಲದಲ್ಲಿಯೇ ನಾನೂ ಜನ್ಮಿಸಿರುವೆನು. ಮಹಾ ಬುದ್ಧಿಶಾಲಿಯಾದ ಯಾವಾತನು ನಿನಗೆ ತಂದೆಯೋ ಆತನೇ ನನಗೂ ತಂದೆ. ಎಲೈ ಸತ್ಪುರುಷನೇ, ತಾಯಿ ಮಾಡಿದ ಅಪರಾಧವು ಪುರುಷರಿಗೆ ಅಪರಾಧವೆನಿಸಬಾರದು. ಅದು ಅಪರಾಧವೂ ಅಲ್ಲ. ಎಲೈ ವರದನೆ, ಇದೊ ಭರತನು ಆರ್ತನಾಗಿ ನಿನ್ನನ್ನಾಶ್ರಯಿಸಿ ಬಂದಿರುವನು. ಅವನನ್ನು ಯಾವ ರೀತಿ ಕಾಣಬೇಕೋ ಆ ರೀತಿ ಕಂಡು ಅನುಗ್ರಹಿಸು'' ಎಂದು ಪ್ರಾರ್ಥಿಸಿದನು.

ಅದನ್ನು ಕೇಳಿ ಸೀತೆಯ ಮನಸ್ಸು ಕರಗಿತು. ''ಆರ್ಯಪುತ್ರ, ಭರತನು ಬಹು ದೈನ್ಯದಿಂದ ಕೇಳಿಕೊಳ್ಳುತ್ತಿದ್ದಾನೆ. ನಿನ್ನ ಯೋಚನೆ ಯೇನು ?'' ಎಂದಳು. ರಾಮನು, ''ಮೈಥಿಲಿ, ನಾನು ಏನನ್ನೂ ಯೋಚಿಸುತ್ತಿಲ್ಲ. ನಾನು ಯೋಚಿಸುತ್ತಿರುವುದೆಲ್ಲ ದಿವಂಗತನಾದ ಮಹಾರಾಜ ದಶರಥನ ವಿಷಯವೇ. ತನ್ನ ಮಕ್ಕಳಲ್ಲಿ ಇಂತಹ ಶ್ರೇಷ್ಠ ಗುಣಗಳಿಂದ ಕೂಡಿರುವ ಮಗನನ್ನು ಆತನು ನೋಡಲಿಲ್ಲವಲ್ಲ ಎಂಬುದೇ

ನನ್ನ ಯೋಚನೆ. ಹೀಗಾದುದು ವಿಧಿಬಲದಿಂದಲೇ ಹೊರತು ಮತ್ತೆ ಬೇರೆಯಲ್ಲ. ಭರತ ಸದೃಶನಾದ ಗುಣನಿಧಿಪುತ್ರನನ್ನು ಹೊಂದಿರುವ ಪುರುಷಶ್ರೇಷ್ಠರಲ್ಲಿಯೂ ವಿಧಿಯು ತನ್ನ ಪರಾಕ್ರಮವನ್ನು ಮೆರೆಯುತ್ತದೆ ಯಲ್ಲವೆ?'' ಎಂದು ಹೇಳಿ ಬಿಸುಸುಯ್ದನು. ಭರತನನ್ನು ಕುರಿತು, ''ವತ್ಸ, ನಿಷ್ಕಲ್ಮಷಹೃದಯನಾದ ನಿನ್ನ ಮಾತುಗಳಿಂದ ನನಗೆ ಸಂತೋಷವಾಗಿದೆ. ನಿನ್ನ ಮಾತುಗಳಿಗೆ ನಾನು ವಶನಾಗಿದ್ದೇನೆ. ನಿನ್ನ ಗುಣಗಳಿಗೆ ಸೋತಿದ್ದೇನೆ. ಆದರೆ ತಂದೆಯಾದ ಮಹಾರಾಜನ ವಚನವನ್ನು ನೀನು ಅನೃತವಾಗಿಸುವುದು ಯುಕ್ತವಲ್ಲ. ನಿನ್ನಂತಹ ಉತ್ತಮ ಪುತ್ರನನ್ನು ಪಡೆದ ಆ ತಂದೆ ಅಸತ್ಯವಂತನೆಂದು ತೆಗಳಿಕೆಗೆ ತುತ್ತಾಗಬೇಕೆ?'' ಎಂದನು.

ಎಷ್ಟು ಸಂತಯಿಸಿದರೂ ಭರತನು ತನ್ನನ್ನೇ ಅನುವರ್ತಿಸುವುದಾಗಿ ವಾದಿಸುತ್ತಿರುವುದನ್ನು ನೋಡಿ ರಾಮನು, ''ನೀನು ಸ್ವರಾಜ್ಯವನ್ನು ರಕ್ಷಿಸಲೇಬೇಕು. ಇದು ನನ್ನ ಆಜ್ಞೆ'' ಎಂದುಬಿಟ್ಟನು. ಭರತನಿಗೆ ಮುಂದೆ ಏನು ಹೇಳುವುದಕ್ಕೂ ತೋರಲಿಲ್ಲ. ಒಂದು ಸಮಯದಮೇಲೆ ರಾಜ್ಯವನ್ನು ಪರಿಪಾಲಿಸುವುದಾಗಿಯೂ ತನಗೆ ವಹಿಸಿದ ರಾಜ್ಯವನ್ನು ಹದಿನಾಲ್ಕು ವರ್ಷಗಳಾದಮೇಲೆ ರಾಮನು ಪುನಃ ಅದನ್ನು ಸ್ವೀಕರಿಸು ವುದೇ ಆ ಸಮಯವೆಂದೂ ಹೇಳಿದನು. ರಾಮನು ಅದಕ್ಕೊಪ್ಪಿದನು. ಭರತನಿಗೆ ಸಂತೋಷವಾಯಿತು. ಮತ್ತೊಂದು ವರವನ್ನು ದಯಪಾಲಿಸ ಬೇಕೆಂದು ಬೇಡಿದನು. ರಾಮನು ಅದನ್ನೂ ಕೊಡಲು ಸಮ್ಮತಿಸಿದ ಮೇಲೆ ಭರತನು ಪಾದೋಪಭುಕ್ತವಾದ ಆತನ ಪಾದುಕೆಗಳನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿ, ಆತನು ಹಿಂತಿರುಗುವವರೆಗೂ ತಾನು ಅವಕ್ಕೆ ವಿಧೇಯನಾಗಿದ್ದುಕೊಂಡು ರಾಜ್ಯವನ್ನು ಪರಿಪಾಲಿಸುವುದಾಗಿ ನಿವೇದಿಸಿಕೊಂಡನು.

ಆ ಮಾತನ್ನು ಕೇಳಿದೊಡನೆಯೆ ರಾಮನಿಗೆ ಸಂತೋಷಾಶ್ಚರ್ಯ ಗಳು ಏಕಕಾಲದಲ್ಲಿಯೆ ಸಮನಿಸಿದುವು. ಬಹುಕಾಲದಿಂದಲೂ ತಾನು ಆರ್ಜಿಸಿದ್ದ ಯಶಸ್ಸನ್ನು ಭರತನು ಅತ್ಯಲ್ಪ ಕಾಲದಲ್ಲಿಯೇ ಆರ್ಜಿಸಿದ ನೆಂದು ಅವನಿಗೆ ಹೆಮ್ಮೆಯಾಯಿತು. ಆನಂದಬಾಷ್ಪಗಳು ತಾವೇ ತಾವಾಗಿ

ಉಕ್ಕಿ ಹರಿದುವು. ಅನುಗ್ರಹ ಬುದ್ಧಿಯಿಂದ ತನ್ನ ಪಾದುಕೆಗಳನ್ನು ಭರತನಿಗಾಗಿ ಬಿಟ್ಟುಕೊಟ್ಟನು. ಮಹಾಪ್ರಸಾದವೆಂದು ಭರತನು ಅವನ್ನು ಸ್ವೀಕರಿಸಿ, ಅವಕ್ಕೆ ಅಭಿಷೇಕೋದಕವನ್ನು ಸಮರ್ಪಿಸಬಯಸಿದನು.

ರಾಮನು ಅವನ ಮಾತುಗಳಿಗೆ ಮನಸೋತು ಅವನ ಇಷ್ಟದಂತೆ ಎಲ್ಲ ಕಾರ್ಯಗಳನ್ನೂ ನಡೆಯಿಸುವುದೆಂದು ಸುಮಂತ್ರನಿಗೆ ಆಜ್ಞಾಪಿಸಿದನು. ಭರತನ ಆನಂದಕ್ಕೆ ಪಾರವಿಲ್ಲವಾಯಿತು. ಅಂದಿಗೆ ತಾನು, ಸ್ವರ್ಗಸ್ಥನಾದ ದಶರಥ ನರಾಧಿಪನಿಗೆ ದಯಿತನೂ ಶೀಲವಂತನೂ ಆದ ಮಗನಾದೆನೆಂದುಕೊಂಡನು. ರಾಜ್ಯವೆಂಬುದು ಒಂದು ಮುಹೂರ್ತವಾದರೂ ಉಪೇಕ್ಷಿಸತಕ್ಕುದಲ್ಲವೆಂದು ರಾಮನು ತ್ವರೆಗೊಳಿಸಲು ಭರತನು ರಾಮನನ್ನು ಕಾಣುವ ಆಶೆಯಿಂದ ಕಾದಿರುವ ಅಯೋಧ್ಯಾ ಜನರಿಗೆ ಆತನ ಪ್ರಸಾದರೂಪವಾದ ಪಾದುಕೆಗಳ ದರ್ಶನವನ್ನು ದೊರೆಯಿಸಿ ಸಂತೋಷಗೊಳಿಸುವುದಾಗಿ ಹೇಳಿ ಸುಮಂತ್ರನೊಡನೆ ತೆರಳಿದನು.

ಅತ್ತ ಭರತನು ಅಯೋಧ್ಯೆಗೆ ತೆರಳಿ ಕೆಲಕಾಲವಾದಮೇಲೆ ಇತ್ತ ಪರ್ಣಶಾಲೆಯಲ್ಲಿ ಒಂದು ದಿನ ಸೀತೆಯು ಆಶ್ರಮದ ಕೆಲಸವನ್ನು ಮಾಡಿ ಮುಗಿಸಿ, ಆಶ್ರಮೋಪವನದ ಬಾಲವೃಕ್ಷಗಳಿಗೆ ನೀರೆರೆಯುತ್ತಿದ್ದಳು. ರಾಮನು ಆ ವೇಳೆಗೆ ಸರಿಯಾಗಿ ಆಶ್ರಮಕ್ಕೆ ಬಂದನು. ಅವನ ಮನಸ್ಸಿನಲ್ಲಿ ಭರತನ ಸ್ಮರಣೆಯೇ ತುಂಬಿಹೋಗಿದ್ದಿತು. ತಂದೆಯಿಂದಲೂ ತನ್ನಿಂದಲೂ ವಿರಹಿತವಾದ ಅಯೋಧ್ಯಾ ರಾಜಧಾನಿಯನ್ನು ಸೇರಿ ಒಬ್ಬಂಟಿಗನಾಗಿ ನಿಂತು ಮಹತ್ತರವಾದ ರಾಜ್ಯಭಾರವನ್ನು ನಿರ್ವಹಿಸುತ್ತಿರುವ ಅವನ ಕಷ್ಟವನ್ನು ನೆನೆದು ರಾಮನಿಗೆ ಬಹಳ ಅನುಕಂಪವುಂಟಾಯಿತು. ಅಂತಹ ದುಃಖಕಾಲಗಳಲ್ಲಿ ಸೀತಾಸಾಹಚರ್ಯವು ಅವನಿಗೆ ಪ್ರಮೋದ ಹೇತುವಾಗಿದ್ದಿತು. ಅವಳು ಆಶ್ರಮದಲ್ಲಿ ಇಲ್ಲದಿದ್ದುದರಿಂದ ಅವಳನ್ನು ಹುಡುಕಿಕೊಂಡು ಉಪವನಕ್ಕೆ ಬಂದನು.

ಉಪವನದಲ್ಲಿ ಸೀತೆ ಆಗತಾನೆ ಗಿಡಗಳಿಗೆ ನೀರೆರೆದುದು ಮುಗಿದಿದ್ದಿತು. ಪಾತಿಗಳಲ್ಲಿ ಹೊಸತಾಗಿ ನೀರೆರೆದಿದ್ದುದರಿಂದ ನೊರೆ ಕಟ್ಟಿಸುತ್ತುತ್ತಿದ್ದಿತು. ಆ ನೀರು ಕದಡಿದ್ದರೂ ಹಕ್ಕಿಗಳು ಬಾಯಾರಿದ್ದುದರಿಂದ ಎರಗಿ ಕುಡಿಯುತ್ತಿದ್ದುವು. ಪಾತಿಯಲ್ಲಿದ್ದ ಸಣ್ಣ ಸಣ್ಣ ಹುಳುಗೂಡುಗಳು

ನೀರು ತುಂಬಿದ್ದುದರಿಂದ ಹುಳುಗಳು ತೊಯ್ದು ಮೇಲೆ ಬರುತ್ತಿದ್ದುವು. ಗಿಡಗಳ ಬುಡಗಳು ನೀರ ಗುರುತಿನಿಂದ ಬಳೆ ತೊಡಿಸಿದಂತೆ ಕಂಗೊಳಿಸುತ್ತಿದ್ದುವು. ರಾಮನು ಸೊಂಪಾದ ಆ ನೋಟವನ್ನು ನೋಡುತ್ತ ಮುಂದುವರಿದು, ಜಲಸೇಚನದಲ್ಲಿ ತೊಡಗಿದ್ದ ಜಾನಕಿಯನ್ನು ಕಂಡನು. ಸುಕುಮಾರಿಯಾದ ಅವಳು ಕಷ್ಟಪಡುತ್ತಿದ್ದುದು ಅವನಿಗೆ ಮರುಕವನ್ನುಂಟುಮಾಡಿತು. ಯಾವಳ ಕರವು ಕನ್ನಡಿಯನ್ನು ಹಿಡಿಯುವುದರಿಂದಲೇ ಸೋತುಹೋಗುತ್ತಿದ್ದಿತೋ ಅದೇ ಈಗ ತುಂಬಿದ ಕೊಡವನ್ನು ಹಿಡಿದರೂ ಸೋಲುತ್ತಿಲ್ಲ. ವನವಾಸವು ಸ್ತ್ರೀಜನಸೌಕುಮಾರ್ಯವನ್ನು ಲತೆಗಳೊಡನೆ ಸಮಸಮವಾಗಿ ಕಠಿನವಾಗಿಸುತ್ತದೆಯಲ್ಲವೆ ಎಂದು ಅವನ ಮನಸ್ಸು ತವಕಗೊಂಡಿತು. ಬಳಿಸಾರಿ, "ಮೈಥಿಲಿ, ತಪಸ್ಸು ಇನ್ನೂ ವರ್ಧಿಸುತ್ತಿರುವುದೆ?" ಎಂದು ಕೇಳಿದನು. ಸೀತೆ ವಿಸ್ಮಿತೆಯಾಗಿ ಹಿಂತಿರುಗಿ ನೋಡಿದಳು. ಧರ್ಮವಿಘ್ನವಾಗದಿದ್ದರೆ ಸ್ವಲ್ಪ ಕುಳಿತುಕೊಳ್ಳಬೇಕೆಂದು ರಾಮನು ನುಡಿಯಲು ಅವಳು ಹಾಗೆ ಮಾಡಿದಳು. ಇಬ್ಬರೂ ಕುಳಿತುಕೊಂಡಮೇಲೆ, ಸೀತೆಯು ಪ್ರಿಯನ ಮುಖದಲ್ಲಿ ಯಾವುದೋ ಚಿಂತೆಯಿದ್ದುದನ್ನು ಕಂಡು, ಅದೇನೆಂದು ಕೇಳಿದಳು. ರಾಮನು ಮಾರನೆಯ ದಿನ ತಾನು ಮಾಡಬೇಕಾಗಿದ್ದ ತಂದೆಯ ಸಾಂವತ್ಸರಿಕ ಶ್ರಾದ್ಧದ ವಿಚಾರವನ್ನು ತಿಳಿಸಿ, ವನವಾಸದಲ್ಲಿರುವವನು ಅದನ್ನು ನಡೆಯಿಸುವುದು ಹೇಗೆ ಎಂಬ ಯೋಚನೆಯನ್ನು ಹೇಳಿದನು. ತಾತ ದಶರಥನಿಗೂ ತನಗೂ ಅನುರೂಪವಾಗಿರುವಂತೆ ಅದನ್ನು ನಿರ್ವಹಿಸಬೇಕೆಂದು ಅವನ ಮನಸ್ಸು. ಭರತನು ಅಯೋಧ್ಯೆಯಲ್ಲಿ ಶ್ರಾದ್ಧವನ್ನು ಮಹಾರ್ಘವಾಗಿ ನಡೆಯಿಸುವನು. ಇಲ್ಲಿ ನಾವದನ್ನು ವನವಾಸಾನುರೂಪವಾಗಿ ಫಲೋದಕಗಳಿಂದ ನಡೆಯಿಸಬಹುದೆಂದು—ಸೀತೆ ಸೂಚಿಸಿದಳು. ತಾತ ದಶರಥನಿಗೆ ಅದೇ ಅತ್ಯಂತ ಬಹುಮತವಾಗುವುದೆಂದೂ ಅವಳು ನುಡಿದಳು. ಆ ಮಾತನ್ನು ಕೇಳಿ ರಾಮನಿಗೆ ತಡೆಯಲಾರದಷ್ಟು ದುಃಖವಾಯಿತು. "ಮೈಥಿಲಿ, ವರ್ಷಗಳಲ್ಲಿ ನಾನು ಕೈಯಾರ ಸಮರ್ಪಿಸಿದ ಫಲಗಳನ್ನು ಕಂಡು ತಾತ ದಶರಥನು ಅಲ್ಲಿದ್ದೇ ನಮ್ಮ ವನವಾಸವನ್ನು ನೆನೆದು ವಿಲಪಿಸುವನಲ್ಲವೆ?" ಎಂದು ಕಂಬನಿದುಂಬಿದನು.

ಸೀತಾರಾಮರು ಹೀಗೆ ಸಲ್ಲಪಿಸುತ್ತಿರುವಾಗ, ಖರವಧೆಯಿಂದಲೂ ಶೂರ್ಪನಖಿಯ ಮುಖವಿರೂಪಣದಿಂದಲೂ ಮತ್ಸರಗೊಂಡು ರಾಮ ಭಾರ್ಯೆಯನ್ನಪಹರಿಸಿ ಪ್ರತೀಕಾರ ಮಾಡುವ ಸಂಕಲ್ಪದಿಂದ ಕಪಟ ಸಂನ್ಯಾಸಿ ವೇಷವನ್ನು ತಾಳಿ ರಾವಣನು ಅಲ್ಲಿಗೆ ಬಂದನು. ರಾಮಾಶ್ರಮ ವನ್ನು ಬಳಿಸಾರಿ, ತಾನು ಅತಿಥಿಯಾಗಿ ಬಂದಿರುವುದಾಗಿ ಘೋಷಿಸಿದನು. ರಾಮನು ಅವನಿಗೆ ಸತ್ಕಾರವನ್ನು ಸಮರ್ಪಿಸಿ, ಆಸನವನ್ನು ಕೊಟ್ಟು ಕುಳ್ಳಿರಿಸಿದನು. ರಾವಣನು ರಾಮನ ಗಂಭೀರಾಕೃತಿಯನ್ನು ನೋಡಿ, ಸತ್ವಯುಕ್ತವಾದ ಅವನ ಸ್ವರವನ್ನು ಕೇಳಿ, ಬೆಚ್ಚಿದರೂ ಅದನ್ನು ಹೊರಕ್ಕೆ ತೋರ್ಪಡಿಸದೆ ಸತ್ಕಾರವನ್ನು ಶಾಂತವಾಗಿ ಪರಿಗ್ರಹಿಸಿದನು. ರಾಮನ ಅಪ್ಪಣೆಯಂತೆ ಸೀತೆಯು ಅವನ ಶುಶ್ರೂಷೆಮಾಡುವುದರಲ್ಲಿರಲು ವ್ಯಾಜಾಂತರದಿಂದ ಅವನು ಬೇಡವೆಂದು ನಿಷೇಧಿಸಿದನು. ಮಾನುಷಿಯ ರಲ್ಲಿ ಅವಳು ಅರುಂಧತಿಯೆಂದೂ, ಅಂತಹವಳು ತನ್ನನ್ನು ಶುಶ್ರೂಷಿಸ ಕೂಡದೆಂದೂ ಅವನು ರಾಮನನ್ನು ಸಮಾಧಾನಮಾಡಿದನು.

ಆಮೇಲೆ ರಾವಣನ ಆಜ್ಞೆಯಂತೆ ಸೀತಾರಾಮರು ಕುಳಿತು ಕೊಂಡರು. ಆಗ ಆ ಕಪಟ ಸಂನ್ಯಾಸಿ ರಾವಣನು ಬ್ರಾಹ್ಮಣ ಸಂಪ್ರದಾಯವನ್ನು ಅನುಸರಿಸಿ, "ಅಯ್ಯಾ ನಾನು ಕಾಶ್ಯಪಗೋತ್ರ ದವನು, ಸಾಂಗೋಪಾಂಗವಾಗಿ ವೇದವನ್ನು ಬಲ್ಲವನು, ಮನುಧರ್ಮ ಶಾಸ್ತ್ರ, ಮಾಹೇಶ್ವರ ಯೋಗಶಾಸ್ತ್ರ, ಬೃಹಸ್ಪತಿಪ್ರಣೀತವಾದ ಅರ್ಥ ಶಾಸ್ತ್ರ, ಮೇಧಾತಿಥಿಯ ನ್ಯಾಯಶಾಸ್ತ್ರ, ಪ್ರಾಚೇತಸವಾದ ಶ್ರಾದ್ಧಕಲ್ಪ —ಈ ಎಲ್ಲವನ್ನೂ ಚೆನ್ನಾಗಿ ಬಲ್ಲೆ" ಎಂದನು. ಈ ಮಾತುಗಳನ್ನು ಕೇಳಿದೊಡನೆಯೆ ರಾಮನಿಗೆ ಕುತೂಹಲವುಂಟಾಯಿತು. ತಾನು ಮಾಡಬೇಕೆಂದಿರುವ ಪಿತೃ ಶ್ರಾದ್ಧವನ್ನು ಆಗಿನ ಸ್ಥಿತಿಯಲ್ಲಿ ಹೇಗೆ ಮಾಡಬೇಕೆಂಬುದನ್ನು ಅವನಿಂದ ತಿಳಿಯಲು ಬಯಸಿದನು. ರಾವಣನು ಎಲ್ಲವನ್ನೂ ತಿಳಿಸಿ, "ಪರಾಕ್ರಮದಿಂದ ಸಂಪಾದಿಸಬೇಕಾದ ದ್ರವ್ಯವೂ ಉಂಟು" ಎನ್ನಲು ರಾಮನು ಉತ್ಸುಕನಾಗಿ ಅದಾವುದೆಂದು ಕೇಳಿದನು. ಆಗ ರಾವಣನು, "ಹಿಮವತ್ಪರ್ವತದ ಸಪ್ತಮಶೃಂಗದಲ್ಲಿ ಸ್ಥಾಣು ಶಿರಸ್ಸಿನಿಂದ ಪ್ರತ್ಯಕ್ಷವಾಗಿ ಜಾರಿದ ಗಂಗಾಜಲವನ್ನು ಪಾನಮಾಡಿ,

ವೈಡೂರ್ಯದಂತೆ ಶ್ಯಾಮಲಪೃಷ್ಠಗಳುಳ್ಳವಾಗಿ, ಪವನಸಮಜವಗಳಾಗಿರುವ ಕಾಂಚನಪಾರ್ಶ್ವಗಳೆಂಬ ಮೃಗಗಳುಂಟು. ವೈಖಾನಸ ವಾಲಖಿಲ್ಯ ನೈಮಿಶೀಯಾದಿ ಮುನಿಗಳು ಸಂಕಲ್ಪಿಸಿದಮಾತ್ರದಿಂದಲೇ ಬಂದು ಮೃತಿಯೊಂದುವ ಆ ಮೃಗಗಳಿಂದ ಶ್ರಾದ್ಧಮಾಡುತ್ತಾರೆ. ಅವುಗಳಿಂದ ಪಿತೃಗಳನ್ನು ತೃಪ್ತಿಗೊಳಿಸಿದರೆ ಸುತಫಲವನ್ನು ಹೊಂದಿ, ಜರೆಯುನ್ನುಳಿದು, ಪ್ರಜ್ವಲಿಸುವ ಶರೀರಗಳಿಂದ ಅವರೆಲ್ಲರೂ ಉತ್ತಮ ಲೋಕವನ್ನು ಸೇರುತ್ತಾರೆ; ಸುರರೊಡನೆ ಸಮಸಮವಾಗಿ ವಿಮಾನ ವಾಸವನ್ನನುಭವಿಸಿ, ಭ್ರಮೆಯುನ್ನುಂಟುಮಾಡುವ ವಿಷಯಾದಿಗಳಿಂದ ದೂರವಾಗುತ್ತಾರೆ'' ಎಂದನು.

ಈ ಮಾತುಗಳನ್ನು ಕೇಳಿದೊಡನೆಯೇ ರಾಮನಿಗೆ ಆ ಮೃಗವನ್ನು ಹಿಡಿದು ತರುವ ಆಸೆಯಾಯಿತು. ಆದರೆ ರಾವಣನು ಅವು ಮನುಷ್ಯರಿಗೆ ಕಾಣಿಸುವುದಿಲ್ಲವೆಂದೂ ಆ ಸಂಕಲ್ಪವನ್ನು ಬಿಡಬೇಕೆಂದೂ ಹೇಳಿದನು. ಹಿಮವಂತನು ತನಗೆ ಆ ಮೃಗಗಳನ್ನು ತೋರದಿದ್ದರೆ ತನ್ನ ಬಾಣಗಳಿಂದ ಭೇದಿಸಿ ತರುವುದಾಗಿ ರಾಮನು ಪ್ರತಿಜ್ಞೆ ಮಾಡಿದನು. ಅಷ್ಟರಲ್ಲಿಯೇ ಸುವರ್ಣಮೃಗವೊಂದು ಸಮೀಪದಲ್ಲಿ ಕಾಣಿಸಿಕೊಂಡಿತು. ಹಿಮವಂತನೇ ಅದನ್ನು ಅನುಗ್ರಹಿಸಿದನೆಂದು ರಾವಣನು ಪ್ರೋತ್ಸಾಹಿಸುತ್ತಿರಲು, ರಾಮನು ಭಗವತ್ಪ್ರಸಾದದಿಂದಲೇ ಅದು ಹಾಗೆ ದೊರೆಯಿತೆಂದು ಸಂತೋಷಪಟ್ಟು ಅರ್ಘ್ಯವನ್ನು ತೆಗೆದುಕೊಂಡು ಅದನ್ನು ಎದುರುಗೊಳ್ಳಲು ಹೋದನು; ಸೀತೆಯು ತಾನು ಮಾಡಬೇಕಾದ ಕಾರ್ಯವೇನೆಂದು ರಾಮನನ್ನು ಕೇಳಲು ಅತಿಥಿ ಶುಶ್ರೂಷೆ ಮಾಡೆಂದು ಆಜ್ಞಾಪಿಸಿ ಹೊರಟುಹೋದನು.

ರಾವಣನಿಗೆ ರಾಮನು ಹೊರಟುಹೋದುದು ಬಹಳ ಸಂತೋಷವಾಯಿತು. ಲಕ್ಷ್ಮಣನು ತೀರ್ಥಯಾತ್ರೆಯಿಂದ ಹಿಂತಿರುಗಿದ್ದ ಆ ತಪೋವನದ ಕುಲಪತಿಗಳನ್ನು ಸಂದರ್ಶಿಸುವುದಕ್ಕಾಗಿ ಮೊದಲೇ ಹೊರಟುಹೋಗಿದ್ದುದರಿಂದ ಅವನೂ ಅಲ್ಲಿರಲಿಲ್ಲ. ಆಶ್ರಮದಲ್ಲಿ ಸೀತೆ ಒಬ್ಬೊಂಟಿಗಳಾಗಿರುವುದು, ಅವನು ಸಂಕಲ್ಪಿಸಿದ್ದ ನೀಚಕಾರ್ಯಕ್ಕೆ ಅನುವು ದೊರೆಯಿತು. ರಾವಣನು ಕೂಡಲೆ ತನ್ನ ಕಪಟವೇಷವನ್ನು

ತೆಗೆದುಹಾಕಿ, ಭಯಂಕರಾಕಾರವನ್ನು ತೋರಿ ಸೀತೆಯನ್ನಪಹರಿಸಿ ಹೊರಟುಹೋಗುತ್ತ, ಜನಸ್ಥಾನದ ನಿವಾಸಿಗಳೆಲ್ಲರನ್ನೂ ಕುರಿತು, "ದಶಗ್ರೀವನು ಸೀತೆಯನ್ನು ಕೊಂಡೊಯ್ಯುತ್ತಿರುವನು. ರಾಮನು ಕ್ಷಾತ್ರಧರ್ಮದಲ್ಲಿ ಮಮತೆಯುಳ್ಳವನಾಗಿದ್ದರೆ ಪರಾಕ್ರಮವನ್ನು ಪ್ರದರ್ಶಿಸಲಿ" ಎಂದು ಕೂಗಿ ಹೇಳಿದನು. ಸೀತೆಯು ಭಯದಿಂದ ತತ್ತಳಿಸುತ್ತ ರಾಮನನ್ನೂ ತನ್ನ ಮೈದುನನಾದ ಲಕ್ಷ್ಮಣನನ್ನೂ ಕಾಪಿಗಾಗಿ ಕೂಗಿಕೊಂಡಳು. ಅವಳ ದೀನಾಲಾಪಗಳನ್ನೂ, ರಾವಣನ ಔದ್ಧತ್ಯ ಭಾಷಿತವನ್ನೂ ಆ ತಪೋವನದಲ್ಲಿದ್ದ ಜಟಾಯುವೆಂಬ ಗೃಧ್ರ ರಾಜನು ಕೇಳಿ, ರಾವಣನೊಡನೆ ಯುದ್ಧಕ್ಕೆ ನಿಂತನು. ಆದರೆ ಚಂಡ ಪರಾಕ್ರಮಿಯಾದ ರಾವಣನ ಪ್ರಹಾರಗಳನ್ನು ಸಹಿಸಲಾರದೆ ಜಟಾಯುವು ಕಡೆಗೆ ಅವನ ಖಡ್ಗದಿಂದ ಪೆಟ್ಟುತಿಂದು ನೆಲಕ್ಕುರುಳಿದನು. ರಾವಣನು ಸಾವಕಾಶವಾಗಿ ಸೀತೆಯನ್ನು ಕದ್ದೊಯ್ದನು.

ಇತ್ತ ಅಯೋಧ್ಯಾ ಪಟ್ಟಣದಲ್ಲಿ ಭರತಕುಮಾರನು ಸೀತಾರಾಮ ಲಕ್ಷ್ಮಣರ ಕುಶಲವಾರ್ತೆಯನ್ನು ತಿಳಿದುಬರಲು ಸುಮಂತ್ರನನ್ನು ದಂಡಕಾರಣ್ಯಕ್ಕೆ ಕಳುಹಿಸಿದ್ದನು. ಸುಮಂತ್ರನು ಅರಣ್ಯಕ್ಕೆ ಹೋಗಿ ರಾಮಾಶ್ರಮವು ಬರಿದಾಗಿದ್ದುದನ್ನೂ, ರಾವಣನು ಸೀತೆಯನ್ನು ಅಪಹರಿಸಿದುದನ್ನೂ, ರಾಮಲಕ್ಷ್ಮಣರು ಅವಳನ್ನು ಹುಡುಕಲು ಹೊರಟುಹೋಗಿದ್ದುದನ್ನೂ ಅಲ್ಲಿಯ ತಾಪಸರಿಂದ ತಿಳಿದು, ಅಯೋಧ್ಯೆಗೆ ಹಿಂತಿರುಗಿ ಭರತಕುಮಾರನಿಗೆ ಆ ವೃತ್ತಾಂತವೆಲ್ಲವನ್ನೂ ಅರಿಕೆಮಾಡಿದನು.

ರಾಮನು, ಜ್ಯೇಷ್ಠಭ್ರಾತೃವಾದ ವಾಲಿಯಿಂದ ನಿರ್ವಾಸಿತನಾದ ಸುಗ್ರೀವನೊಡನೆ ಮೈತ್ರಿಯನ್ನು ಬೆಳೆಸಿ, ತನ್ನಂತೆಯೇ ಪ್ರಿಯಾವಿರಹ ದುಃಖದಿಂದ ಪೀಡಿತನಾದ ಅವನಿಗಾಗಿ ವಾಲಿಯನ್ನು ಕೊಂದು ಕಿಷ್ಕಿಂಧೆಯಲ್ಲಿ ಅವನನ್ನು ಪ್ರತಿಷ್ಠಿಸಿದುದೂ ಭರತನಿಗೆ ಸುಮಂತ್ರನಿಂದ ತಿಳಿಯಿತು. ಭ್ರಾತೃವತ್ಸಲನಾದ ಭರತನಿಗೆ ಆ ವಾರ್ತೆಯನ್ನು ಕೇಳಿದೊಡನೆಯೆ ಮಹತ್ತರವಾದ ದುಃಖಬಂದು ಮೂರ್ಛೆಹೋದನು. ಸುಮಂತ್ರನಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ತಂದೆಯಿಂದಲೂ ಬಂಧುಜನರಿಂದಲೂ ಅಗಲಿ, ವನಪ್ರದೇಶದಲ್ಲಿ ಮಹತ್ತರವಾದ ಕಷ್ಟಗಳನ್ನನುಭವಿಸಿ

ಭಾರ್ಯಾವಿರಹದುಃಖವನ್ನೂ ಹೊಂದಿ ಕಾಂತಿಹೀನನಾದ ಜೀಮೂತ ಚಂದ್ರನಂತೆ ಕಷ್ಟಕ್ಕೀಡಾದ ರಾಮಚಂದ್ರನನ್ನು ನೆನೆದು ಭರತನು ಬಹಳ ವಾಗಿ ಸಂತಪಿಸಿದನು. ಇಷ್ಟು ಅನರ್ಥಗಳೂ ತನ್ನ ತಾಯಿಯಾದ ಕೈಕೆಯಿಂದಲೇ ಉಂಟಾದುವೆಂದು ಅವನ ಸಂತಾಪ ಮಿತಿಮೀರಿ ಅದು ಕೋಪವಾಗಿ ಪರಿಣಮಿಸಿತು. ಅವಳನ್ನು ಚೆನ್ನಾಗಿ ಹಳಿದಾದರೂ ಒಂದು ವಿಧದಲ್ಲಿ ಸೇಡುತೀರಿಸಿ ಮನಸ್ಸಿಗೆ ಶಾಂತಿಯನ್ನು ತಂದುಕೊಳ್ಳಬೇಕೆಂದು ನಿಶ್ಚಯಿಸಿಕೊಂಡು ಅವಳ ಬಳಿಗೈದಿದನು.

ಪ್ರಿಯಪುತ್ರನಾದ ಭರತನು ಯಾವುದೋ ಪ್ರಿಯವಾರ್ತೆಯನ್ನು ತಂದಿರುವುದಾಗಿ ಕೈಕೆಯು ಭಾವಿಸಿದಳು. ಏಕೆಂದರೆ ಸುಮಂತ್ರನು ರಾಮನ ಬಳಿಯಿಂದ ಹಿಂತಿರುಗಿದನೆಂಬ ಸುದ್ದಿಯು ಅವಳಿಗೆ ಗೊತ್ತಿದ್ದಿತು. ಆದರೆ ಅವಳು ಅತ್ಯಂತ ಅಪ್ರಿಯವಾದ ಮಾತುಗಳನ್ನು ಕೇಳಬೇಕಾಯಿತು. "ಸ್ವರಾಜ್ಯವನ್ನು ಪರಿತ್ಯಜಿಸಿ, ನಿನ್ನ ಅಪ್ಪಣೆಯಂತೆ ವನವಾಸ ದುಃಖವನ್ನನುಭವಿಸುತ್ತಿರುವ ರಾಮಚಂದ್ರನ ಭಾರ್ಯೆಯು ಅಪಹೃತ ಳಾದಳು. ಅಮ್ಮ, ನಿನ್ನ ಮನೋರಥವೆಲ್ಲ ಇಂದಿಗೆ ಸಂಪೂರ್ಣವಾಗಿ ಈಡೇರಿತು," ಎಂದು ಭರತನು ಚುಚ್ಚಿ ಮಾತನಾಡಿದನು. ಪಶ್ಚಾತ್ತಾಪ ಪೀಡಿತಳಾಗಿದ್ದ ಕೈಕೆಗೆ ಆ ಮಾತು ಕರ್ಣಕಠೋರವಾಗಿ ಪರಿಣಮಿಸಿತು. ಅವಳು ದಿಟವಾಗಿಯೂ ರಾಮನನ್ನು ಅತ್ಯಂತವಾಗಿ ಪ್ರೀತಿಸುತ್ತಿದ್ದವಳು. ವಧುವಾದ ಸೀತೆಯಲ್ಲಿ ಅವಳಿಗಿದ್ದ ಪ್ರೇಮವೂ ಅನ್ಯಾದೃಶವಾದುದು. ಶುಭಾಶಂಸೆಯಿಂದ ತಾನು ಮಾಡಿದ ಪ್ರಯತ್ನವು ಆ ರೀತಿ ವಿಫಲವಾದು ದಕ್ಕೆ ವಿಧಿಯೇ ಮುಖ್ಯ ಕಾರಣವಾಯಿತೆಂದು ಅವಳು ಸಂತಪಿಸಿದಳು. ಸಮಯದಲ್ಲಿ ಎಲ್ಲವನ್ನೂ ತಿಳಿಸುವೆನೆಂದು ಹಿಂದೆ ಅವಳು ಭರತನಿಗೆ ಹೇಳಿದುದನ್ನು ನೆನಪಿಗೆ ತಂದುಕೊಂಡು, ಅದೇ ಸಮಯವೆಂದು ನಿಶ್ಚಯಿಸಿ, "ವತ್ಸ, ನೀನು ಮಹಾರಾಜನಿಗೆ ಬಂದಿದ್ದ ಶಾಪವೃತ್ತಾಂತ ವನ್ನು ಬಲ್ಲೆಯಾ?" ಎಂದು ಕೇಳಿ ಕಂಬನಿದುಂಬಿದಳು.

ಭರತನಿಗೆ ಆಶ್ಚರ್ಯವಾಯಿತು. ಧರ್ಮಾತ್ಮನಾದ ತನ್ನ ತಂದೆಗೆ ಶಾಪವೆಂದರೇನು? ಅವನಿಗೊಂದೂ ತಿಳಿಯಲಿಲ್ಲ. ಸುಮಂತ್ರನು ಕೈಕೆಯ ಆಜ್ಞೆಯಂತೆ, ಪೂರ್ವದಲ್ಲಿ ಮಹಾರಾಜ ದಶರಥನು ಬೇಟೆಗೆ ಹೋಗಿದ್ದಾಗ

ಕೊಳದಲ್ಲಿ ನೀರು ತರುತ್ತಿದ್ದ ಋಷಿಕುಮಾರನನ್ನು ಆನೆಯೆಂದು ಭ್ರಮಿಸಿ ಬಾಣದಿಂದ ಕೊಂದುದು, ಪುತ್ರವಿಯೋಗಪೀಡಿತನಾದ ಮಹರ್ಷಿಯು ತನ್ನಂತೆಯೆ ಮಹಾರಾಜನೂ ಮರಣಹೊಂದತಕ್ಕುದೆಂದು ಶಪಿಸಿದುದು ಮುಂತಾಗಿ ಎಲ್ಲ ವೃತ್ತಾಂತವನ್ನೂ ಭರತನಿಗೆ ತಿಳಿಸಿದನು.

ಕೈಕೆಯು ಆ ನಿಮಿತ್ತವಾಗಿ ತಾನು ಅಪರಾಧಿನಿಯಾದರೂ ಚಿಂತೆಯಿಲ್ಲವೆಂದು ನಿರ್ಧರಿಸಿ, ರಾಮನನ್ನು ವನಕ್ಕೆ ಕಳುಹಿಸಿದುದಾಗಿಯೂ ರಾಜ್ಯಲೋಭದಿಂದಲ್ಲವೆಂದೂ ಮಹರ್ಷಿ ಶಾಪವು ಪುತ್ರವಿಪ್ರವಾಸದಿಂದ ಹೊರತು ಪರಿಹರಣೀಯವಾಗುವುದಿಲ್ಲವೆಂದು ತಾನು ತಿಳಿದುದಾಗಿಯೂ ಹೇಳಿದಳು. ಭರತನು ಹಾಗಿದ್ದರೆ ತನ್ನನ್ನೇಕೆ ಅರಣ್ಯಕ್ಕೆ ಕಳುಹಿಸಲಿಲ್ಲವೆಂದು ಕೇಳಿದನು. ಅವಳು, ಮಾತುಲನ ಮನೆಯಲ್ಲಿದ್ದುದರಿಂದ ವಿಪ್ರವಾಸವು ಅವನಿಗೆ ನಿಸರ್ಗವಾಗಿದ್ದಿತೆಂದು ಸಮಾಧಾನಗೊಳಿಸಿದಳು. ಭರತನಿಗೆ ಅಲ್ಲಿಗೂ ಸಮಾಧಾನವಾಗಲಿಲ್ಲ. ಹದಿನಾಲ್ಕು ವರ್ಷಗಳ ಅವಧಿಯನ್ನು ಯಾವ ಕಾರಣದಿಂದ ವಿಧಿಸಿದುದಾಗಿ ಪ್ರಶ್ನಿಸಿದನು. ಕೈಕೆಯು ತಾನು ಹದಿನಾಲ್ಕು ದಿನಗಳೆಂದು ಕೇಳಬಯಸಿದುದು ಬಾಯಿತಪ್ಪಿ ಹದಿನಾಲ್ಕು ವರ್ಷಗಳೆಂದು ಹೇಳಿದುದು ಮೊದಲಾದ ಸಂಗತಿಗಳನ್ನೆಲ್ಲ ಅವನಿಗೆ ತಿಳಿಸಿದಳು.

ವಸಿಷ್ಠ ವಾಮದೇವರೇ ಮೊದಲಾದ ಎಲ್ಲರಿಗೂ ಆ ವಿಚಾರವು ತಿಳಿದಿದ್ದುದರಿಂದ, ವಿಧಿಬಲದಿಂದಲೇ ಅಷ್ಟೆಲ್ಲ ನಡೆಯಿತೆಂದು ಭರತನಿಗೆ ಮನವರಿಕೆಯಾಯಿತು. ಕೈಕೆಯ ವಿಷಯದಲ್ಲಿ ಅವನಿಗಿದ್ದ ದುರ್ಭಾವನೆಗಳೆಲ್ಲ ದೂರವಾಯಿತು. ಸಹಜವಾದ ಮಾತೃಭಕ್ತಿಯಿಂದ ಅವನು ಅವಳನ್ನು ನಮಸ್ಕರಿಸಿ ಗೌರವಿಸಿದನು. ಅವಳೂ ತಾಯಮಮತೆಯಿಂದ, ''ಮಗು, ಯಾವ ತಾಯಿಯು ತಾನೆ ಮಗನ ಅಪರಾಧವನ್ನು ಮನ್ನಿಸುವುದಿಲ್ಲ'' ಎಂದು ಹೇಳಿ ಅವನನ್ನು ಸಂತೋಷಗೊಳಿಸಿದಳು.

ಇದಾದಮೇಲೆ ಭರತಕುಮಾರನು ಅವಳ ಅಪ್ಪಣೆಯನ್ನು ಪಡೆದು ರಾಮನ ಸಹಾಯಾರ್ಥವಾಗಿ ಸಮಸ್ತ ರಾಜಮಂಡಲವೂ ಸಮಸ್ತ ಸೇನೆಯೂ ಸಜ್ಜುಗೊಳ್ಳಬೇಕೆಂದು ಬೆಸಸಿದನು. ಲಂಕೇಶ್ವರನಾದ ದುರುಳ

ರಾವಣನ ನಿಗ್ರಹಕ್ಕೆ ನೆರವಾಗುವುದಾಗಿ ಸಂಕಲ್ಪಿಸಿದ ಅವನ ಆಜ್ಞೆಯಂತೆ ರಾಜಮಂಡಲವೂ ಸೇನೆಯೂ ಹೊರಟಿತು.

ಚತುರಂಗ ಬಲದೊಡನೆ ಭರತನು ದಂಡಕಾರಣ್ಯವನ್ನು ಸೇರಿ, ಅಲ್ಲಿಂದ ರಾಮನ ಸಹಾಯಕ್ಕಾಗಿ ಹೊರಡಬೇಕೆಂದಿರುವಷ್ಟರಲ್ಲಿ ಅವನಿಗೆ ರಾಮನ ವಿಜಯವಾರ್ತೆಯು ತಿಳಿಯಿತು. ರಾಮನು ತ್ರಿಲೋಕಕಂಟಕನಾದ ರಾವಣನನ್ನು ನಾಶಗೊಳಿಸಿ, ರಾಕ್ಷಸಜಾತಿಗೆ ವಿರುದ್ಧವಾದ ಸದಾಚಾರಸದ್ಧರ್ಮಗಳುಳ್ಳವನಾಗಿ ಸದ್ಗುಣಭೂಷಣನೆನಿಸಿದ್ದ ವಿಭೀಷಣನನ್ನು ಲಂಕಾರಾಜ್ಯದಲ್ಲಿ ನೆಲೆಗೊಳಿಸಿ, ದೇವದೇವರ್ಷಿ ಸಿದ್ಧರ ಸಮಕ್ಷದಲ್ಲಿ ವಿಮಲಚರಿತೆಯೆನಿಸಿದ ಸೀತಾದೇವಿಯೊಡನೆ ಮುಖ್ಯ ರಾಕ್ಷಸ ವಾನರ ಮುಖ್ಯರಿಂದ ಪರಿವೃತನಾಗಿ, ಆಶ್ರಮಕ್ಕೆ ಹಿಂತಿರುಗಿದುದು ಭರತನಿಗೆ ತಿಳಿಯಿತು. ಭರತನು ತಾಯಿಯರೊಡನೆಯೂ ಪರಿವಾರದೊಡನೆಯೂ ರಾಮಚಂದ್ರನನ್ನು ಆಶ್ರಮದಲ್ಲಿಯೇ ಸಂದರ್ಶಿಸಲು ಆಗಮಿಸಿದನು.

ಇತ್ತ ಆಶ್ರಮದಲ್ಲಿ ವಿಜಯಿಯಾದ ರಾಮನು ಪೂರ್ಣಮನೋರಥನಾಗಿ ತಪೋವನದ ತಾಪಸಿಯರಿಗೆ ನಮಸ್ಕಾರ ಮಾಡಿ ಆಶಿಷಗಳನ್ನು ಪಡೆಯಲು ಹೋಗಿದ್ದ ಜಾನಕಿಯ ಬರವನ್ನು ನಿರೀಕ್ಷಿಸುತ್ತಿದ್ದನು. ಆಶ್ರಮದ ತಾಪಸಿಯರು ಅವರವರ ವಯಸ್ಸಿಗೆ ತಕ್ಕಂತೆ ಸಖಿ, ಸೀತೆ, ಜಾನಕಿ, ಸ್ನುಷೆ ಎಂದು ಅತ್ಯಂತ ಪ್ರೀತಿಯಿಂದ ಅವಳನ್ನು ಸಂಬೋಧಿಸಿ ಗೌರವಿಸಿದುದನ್ನು ದೂರದಿಂದಲೇ ಕಂಡು ರಾಮನಿಗೆ ಅತ್ಯಾನಂದವಾಯಿತು. ಸೀತೆಯೂ ಆಶ್ರಮವಾಸಿನಿಯರೊಡನೆ ಕೆಲಕಾಲ ಮಧುರವಾಗಿ ಮಾತನಾಡುತ್ತಿದ್ದು ಆ ಬಳಿಕ ರಾಮನಿದ್ದೆಡೆಗೆ ಬಂದಳು.

ಸೀತಾರಾಮರಿಬ್ಬರೂ ತಪೋವನದ ಸೊಬಗನ್ನು ನೋಡಿ ಸಂತೋಷಿಸಿದರು. ಅವರೀರ್ವರೂ ಅಲ್ಲಲ್ಲಿಯ ಸೌಂದರ್ಯವಿಶೇಷಗಳನ್ನೂ, ಹಿಂದೆ ಅಲ್ಲಿ ತಾವು ಅನುಭವಿಸಿದ ಸುಖದುಃಖಗಳನ್ನೂ ನೆನೆದು ಪರಸ್ಪರ ಸಲ್ಲಪಿಸುತ್ತಿರುವಂತೆಯೇ ಲಕ್ಷ್ಮಣನು ತ್ವರೆಯಿಂದ ಅಲ್ಲಿಗೆ ಬಂದನು. ಭ್ರಾತೃವತ್ಸಲನಾದ ಭರತನು ಮಹತ್ತರವಾದ ಸೈನ್ಯದೊಡನೆಯೂ ತಾಯಿಯರೊಡನೆಯೂ ಸಂದರ್ಶನಾರ್ಥಿಯಾಗಿ ಬಂದಿರುವನೆಂದು

ಲಕ್ಷ್ಮಣನು ಅಣ್ಣನಿಗೆ ತಿಳಿಸಿದನು. ರಾಮನು ಪ್ರೀತಿಯಿಂದ ಅವನನ್ನು ಬರಮಾಡಿಕೊಂಡನು. ಎಲ್ಲರೂ ಬಂದ ಬಳಿಕ ರಾಮನು ಮೊದಲು ತನ್ನ ತಾಯಿಯರೆಲ್ಲರಿಗೂ ನಮಸ್ಕರಿಸಿ ಅವರ ಆಶಿಷಗಳನ್ನು ಪಡೆದನು. ಸೀತೆಯೂ ಲಕ್ಷ್ಮಣನೂ ನಮಸ್ಕರಿಸಿ ಅವರ ಆಶೀರ್ವಾದಗಳನ್ನು ಪಡೆದ ಮೇಲೆ ಭರತನು ರಾಜ್ಯಭಾರವನ್ನು ಕೈಕೊಳ್ಳಬೇಕೆಂದು ರಾಮನನ್ನು ಪ್ರಾರ್ಥಿಸಿದನು. ಕೈಕೆಯೂ ಚಿರಾಭಿಲಷಿತವಾದ ಆ ಮನೋರಥವನ್ನು ಈಡೇರಿಸಿಕೊಡಬೇಕೆಂದು ರಾಮನನ್ನು ಪ್ರಾರ್ಥಿಸಿದಳು. ಆ ಹೊತ್ತಿಗೆ ಶತ್ರುಘ್ನನೂ ಅಲ್ಲಿಗೆ ಬಂದು ವಸಿಷ್ಠ ವಾಮದೇವರು ಪುರಜನ ಸಹಿತರಾಗಿ ಅಭಿಷೇಕವನ್ನು ಪುರಸ್ಕರಿಸಿಕೊಂಡು ರಾಮದರ್ಶನಾಭಿಲಾಷಿಗಳಾಗಿ ಬಂದಿರುವ ವಾರ್ತೆಯನ್ನು ತಿಳಿಸಿದನು. ಕೈಕೆಯು ರಾಮಾಭಿಷೇಕವನ್ನು ಅಭಿಲಷಿಸುವುದಾಗಿಯೂ ಅವರನ್ನು ಜಾಗ್ರತೆಯಾಗಿ ಬರಮಾಡಬೇಕೆಂಬುದಾಗಿಯೂ ಆಜ್ಞಾಪಿಸಿದಳು. ಅವಳ ಅಪ್ಪಣೆಯಂತೆ ಶತ್ರುಘ್ನನು ಎಲ್ಲರನ್ನೂ ಬರಮಾಡಿದನು.

ಮಹರ್ಷಿಗಳಾದ ವಸಿಷ್ಠ ವಾಮದೇವರು 'ನಿನಗೆ ವಿಜಯವಾಗಲಿ' ಎಂದು ರಾಮನನ್ನು ಹರಸಿದರು. ಕಂಚುಕಿಗಳು 'ಸ್ವಾಮಿಯು ಜಯಿಸಲಿ' ಎಂದರು. ಮಂತ್ರಿಜನರು 'ಮಹಾರಾಜನಿಗೆ ವಿಜಯವಾಗಲಿ' ಎಂದೂ, ಸೇವಕ ಜನರು 'ದೇವರು ಜಯಿಸಲಿ' ಎಂದೂ, ಸ್ವಜನರು 'ಭದ್ರಮುಖನಿಗೆ ವಿಜಯವಾಗಲಿ' ಎಂದೂ, ಅಂತಃಪುರದವರು 'ಆರ್ಯನು ಜಯಿಸಲಿ' ಎಂದೂ ಪುರಜನರೆಲ್ಲರೂ 'ರಾವಣಾಂತಕನು ಜಯಿಸಲಿ' ಎಂದೂ ವಿಜಯಘೋಷವನ್ನು ಮಾಡುತ್ತ ರಾಮಚಂದ್ರನನ್ನು ಗೌರವಿಸಿದರು.

ಅಲ್ಲಿಯೇ ರಾಮನ ಪಟ್ಟಾಭಿಷೇಕ ಸಮಾರಂಭವು ನಡೆಯಿತು. ಎಲ್ಲರೂ ಸಂತೋಷ ಸಂಭ್ರಮದಲ್ಲಿರಲು, ರಾವಣನ ವಿಮಾನವಾದ ಪುಷ್ಪಕವು ಅಲ್ಲಿಗೆ ಬಂದಿತು. ರಾಮನು ಎಲ್ಲರೊಡನೆಯೂ ಆ ವಿಮಾನವನ್ನೇರಿ ಅಯೋಧ್ಯೆಗೆ ಬಂದನು. ಹೀಗೆ ತಂದೆಯ ಅನುಮತಿಯಂತೆ ಹದಿನಾಲ್ಕು ವರ್ಷಗಳ ವನವಾಸವನ್ನನುಭವಿಸಿ ದುರುಳ ರಾವಣನನ್ನು ಸಂಹರಿಸಿ, ಭಾರ್ಯೆಯಾದ ಸೀತೆಯೊಡಗೂಡಿ ವಿಜಯಿಯಾಗಿ

ಹಿಂತಿರುಗಿದ ಅವನನ್ನು ಪುರಜನರೆಲ್ಲರೂ ತಾರೆಗಳೊಡನೆ ಮೂಡುವ ಚಂದ್ರನನ್ನು ಎಂತೋ ಅಂತು ಸಂದರ್ಶಿಸಿ ಆನಂದಿಸಿದರು.

ಯಥಾ ರಾಮಶ್ಚ ಜಾನಕ್ಯಾ ಬಂಧುಭಿಶ್ಚ ಸಮಾಗತಃ ।
ತಥಾ ಲಕ್ಷ್ಮ್ಯಾ ಸಮಾಯುಕ್ತೋ ರಾಜಾ ಭೂಮಿಂ ಪ್ರಶಾಸ್ತು ನಃ ॥

---

# ಅಭಿಜ್ಞಾನ ಶಾಕುಂತಲ

ಪಾವನವಾದ ಗಂಗಾನದಿಯ ತೀರದಲ್ಲಿ ಹಸ್ತಿನಾವತೀ ಪಟ್ಟಣ; ಪುರುವಂಶದ ದುಷ್ಯಂತ ಮಹಾರಾಜನ ರಾಜಧಾನಿ ಅದು. ಅವನ ರಾಜ್ಯವು ಚತುಸ್ಸಮುದ್ರಮುದ್ರಿತವಾದ ಅಖಂಡಭೂಮಂಡಲವನ್ನೊಳಗೊಂಡಿದ್ದಿತು. ಒಂದು ದಿನ ಅವನು ಉಚಿತ ಪರಿವಾರದೊಡನೆ ಬೇಟೆಯಾಡುವುದಕ್ಕಾಗಿ ಅಡವಿಗೆ ಬಂದನು. ರಥವೇರಿ ಬೇಟೆಯಲ್ಲಿ ತೊಡಗಿದ್ದ ಅವನ ದೃಷ್ಟಿಗೆ ಜಿಂಕೆಯೊಂದು ಕಾಣಿಸಿಕೊಂಡಿತು. ಅದೇ ಬೇಟೆಯ ಗುರಿಯಾಯಿತು. ಸಾರಥಿಯು ರಥವನ್ನು ಆ ಕಡೆಗೆ ಓಡಿಸಿದನು. ವೇಗವಾಗಿ ಅಟ್ಟಿಬರುತ್ತಿದ್ದ ರಥವನ್ನು ಕಂಡು ಜಿಂಕೆಯು ಪ್ರಾಣಭಯದಿಂದ ತತ್ತರಿಸುತ್ತ, ಕೊರಳು ಕೊಂಕಿಸಿ, ಬೆದರುಗಂಗಳಿಂದ ಅಡಿಗಡಿಗೂ ಹಿಂದಿರುಗಿ ನೋಡುತ್ತ, ಬಾಣ ಬಿದ್ದೀತೆಂದು ಬೆದರಿ, ಮೆಯ್ಯ ಹಿಂಭಾಗವನ್ನೆಲ್ಲ ಮುಂದಡಗಿಸಿಕೊಂಡು ದೊಡ್ಡ ದೊಡ್ಡ ದಾಟುಗಳಿಟ್ಟು, ಬಳಲಿ ಬಾಯಿಬಿಟ್ಟು, ಅರೆಯುಗಿದ ದರ್ಭೆಯ ಹುಲ್ಲನ್ನು ದಾರಿಯುದ್ದಕ್ಕೂ ಕಾರುತ್ತ ಓಡತೊಡಗಿತು. ಹಳ್ಳತಿಟ್ಟುಗಳಿಲ್ಲದ ಸಮಭೂಮಿಯಲ್ಲಿ ಸರಿಯಾದ ಅನುವು ದೊರಕಲು ದುಷ್ಯಂತನು ಬಾಣಪ್ರಯೋಗ ಮಾಡುವಷ್ಟರಲ್ಲಿಯೇ ಬಾಣಕ್ಕೂ ಜಿಂಕೆಗೂ ನಡುವೆ ಮೂವರು ತಾಪಸರು ಅಡ್ಡಬಂದರು. ಅವರಲ್ಲಿ ಒಬ್ಬನಾದ ವೈಖಾನಸನು, "ಅರಸನೇ, ಇದು ಆಶ್ರಮದ ಜಿಂಕೆ, ಕೊಲ್ಲಬೇಡ. ಅಂಬನ್ನಿಳಿಸು. ಪುರುವಂಶದವನಾದ ನಿನ್ನ ಶಸ್ತ್ರವಿರುವುದು ನೊಂದವರನ್ನು ಕಾಯುವುದಕ್ಕಲ್ಲದೆ ಕೊಲ್ಲುವುದಕ್ಕಲ್ಲ" ಎಂದನು. ದುಷ್ಯಂತನು ಮರುಮಾತನ್ನಾಡದೆ ಅಂಬನ್ನು ಇಳುಹಿದನು. ತಾಪಸರಿಗೆ ಸಂತೋಷವಾಯಿತು; "ಕುಲೋನ್ನತಿಗೆ ತಕ್ಕಂತೆ ದೊಡ್ಡತನವನ್ನು ಮೆರೆದೆ. ನಿನ್ನಂತೆಯೇ ಗುಣಾಢ್ಯನಾಗಿ, ಚಕ್ರವರ್ತಿಯೆನಿಸುವ ಪುತ್ರನನ್ನು ಪಡೆ" ಎಂದು ಅರಸನನ್ನು ಹರಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ವೈಖಾನಸನು, ತಾನು ಮಿತ್ರರೊಂದಿಗೆ ಸಮಿತ್ತು ತರಲು ಹೋಗು ತ್ತಿರುವುದಾಗಿಯೂ ಅವಕಾಶವಿದ್ದಲ್ಲಿ ಕುಲಪತಿಗಳಾದ ಕಣ್ವರ ಆಶ್ರಮಕ್ಕೆ ಬಿಜಮಾಡಿ, ಆತಿಥ್ಯವನ್ನು ಸ್ವೀಕರಿಸಬೇಕೆಂಬುದಾಗಿಯೂ ದುಷ್ಯಂತನಿಗೆ ಅರಿಕೆಮಾಡಿದನು. ಕಣ್ವರು ಸೋಮತೀರ್ಥಕ್ಕೆ ಹೋಗಿರುವುದೂ, ಅವರ ಮಗಳಾದ ಶಕುಂತಲೆಯು ಅವರ ಅಪ್ಪಣೆಯಂತೆ ಅತಿಥಿಗಳನ್ನು ಆದರಿಸಲು ಆಶ್ರಮದಲ್ಲಿಯೇ ಇರುವುದೂ ಅರಸನಿಗೆ ಗೊತ್ತಾಯಿತು. "ಆಕೆಯೇ ನನ್ನ ಭಕ್ತಿಯನ್ನು ಮಹರ್ಷಿಗಳಿಗೆ ಒಪ್ಪಿಸುವಳು" ಎಂದು ಯೋಚಿಸಿ ಅರಸನು ಆಶ್ರಮದ ಕಡೆಗೆ ತೆರಳಿದನು.

ಮಾಲಿನೀ ನದಿಯ ತೀರದಲ್ಲಿ ಕಣ್ವರ ಆಶ್ರಮ; ಆ ಪುಣ್ಯಾಶ್ರಮ ವನ್ನು ನೋಡಿ ಪುನೀತನಾಗಬಯಸಿ ಅರಸನು ರಥದಲ್ಲಿ ಕುಳಿತು ಸ್ವಲ್ಪ ದೂರವೇ ಹೋದನು. ಆಶ್ರಮವನ್ನು ಕಾಣುತ್ತಲೆ ರಥದಿಂದಿಳಿದು, ವಿನೀತವೇಷದಿಂದ ಹೋಗಬೇಕೆಂದುಕೊಂಡು ಬಿಲ್ಲು ಬಾಣಗಳನ್ನೂ ಭೂಷಣಗಳನ್ನೂ ಸಾರಥಿಯ ವಶದಲ್ಲಿ ಬಿಟ್ಟು ತಾನು ಪೂಜ್ಯರನ್ನು ಸಂದರ್ಶಿಸಿ ಬರುವಷ್ಟರಲ್ಲಿ ಕುದುರೆಗಳನ್ನು ಸಂತಯಿಸಬೇಕೆಂದು ಅವನಿಗೆ ಬೆಸಸಿ ಮುಂದಕ್ಕೆ ಹೊರಟನು. ಆಶ್ರಮ ದ್ವಾರವನ್ನು ಸಮೀಪಿಸುತ್ತಲೆ ಅವನ ಬಲಭುಜವು ಅದುರಿ ಶುಭ ಶಕುನವಾಯಿತು. "ಏಸಿದು, ಶಾಂತವಾದ ಆಶ್ರಮ ಪ್ರದೇಶ! ಭುಜವದುರಿ ಒಳ್ಳೆಯ ಶಕುನ ವಾಗುತ್ತಿದೆ. ಫಲವೇನಿದ್ದೀತು? ಅಥವಾ ಫಲವು ದೊರಕುವುದಿದ್ದರೆ ಎಲ್ಲೆಡೆಗಳಲ್ಲಿಯೂ ಕಾರಣಗಳು ತಾವಾಗಿಯೇ ಹುಟ್ಟಿಕೊಳ್ಳುತ್ತವೆ" ಎಂದುಕೊಂಡು ಅವನು ಆಶ್ಚರ್ಯಪಡುತ್ತಿದ್ದನು.

ಅಷ್ಟರಲ್ಲಿಯೇ ಆಶ್ರಮದ ಬಲಗಡೆಯ ವೃಕ್ಷವಾಟಿಕೆಯಿಂದ ಮಧುರವಾದ ಧ್ವನಿಗಳು ಕೇಳಬಂದುವು. ಏನಿರಬಹುದೆಂದು ದುಷ್ಯಂತನು ಆಲಿಸಿ ಆ ಕಡೆ ನೋಡಿದನು. ತಾಪಸ ಕನ್ಯೆಯರು ಗಡಿಗೆಗಳಲ್ಲಿ ನೀರು ಹೊತ್ತು ಎಳ ಸಸಿಗಳಿಗೆ ನೀರೆರೆಯುತ್ತಿದ್ದರು. ಅವರ ಸೊಬಗಿನ ನೋಟಕ್ಕೆ ಬೆರಗಾದ ಅರಸನು, "ರಾಣಿವಾಸಗಳಲ್ಲಿಯೂ ಇಂತಹ ಚೆಲುವೆಯರು ವಿರಳ. ಇವರ ಚೆಲುವನ್ನು ನೋಡಿದರೆ ವನಲತೆಗಳೇ ಉದ್ಯಾನ ಲತೆಗಳನ್ನು ಮೀರಿಸಿರುವಂತೆ ತೋರುತ್ತದೆ" ಎಂದು ಮತ್ತಷ್ಟು

ವಿಸ್ಮಿತನಾಗಿ, ಬಳಿಯಲ್ಲಿದ್ದ ಮರದ ನೆಳಲಲ್ಲಿ ಕುಳಿತು, ಅವರ ಬರವನ್ನೇ ನಿರೀಕ್ಷಿಸುತ್ತಿದ್ದನು.

ಆಗ ಶಕುಂತಲೆಯು ಗೆಳತಿಯರಾದ ಅನಸೂಯೆ ಪ್ರಿಯಂವದೆಯರೊಡನೆ ಸಸಿಗಳಿಗೆ ನೀರೆರೆಯುತ್ತ ಅತ್ತ ಸುಳಿದಳು. ಕಣ್ವರಿಗೆ ಆಶ್ರಮದ ಗಿಡಮರಗಳಲ್ಲಿ ಎಣೆಯಿಲ್ಲದಷ್ಟು ವಾತ್ಸಲ್ಯ; ಅದು ಮಗಳಾದ ಶಕುಂತಲೆಯಲ್ಲಿ ಇದ್ದ ಮಮತೆಗೂ ಹೆಚ್ಚಿನದು. ಆದ್ದರಿಂದಲೇ ಅವರು ಮುದ್ದು ಮಗಳಾದ ಶಕುಂತಲೆಯನ್ನು ಆ ಗಿಡಮರಗಳ ಆರೈಕೆಗೆ ನೇಮಿಸಿದ್ದರು. ಆದರೆ ಅವಳು ಮಾತ್ರ ತಂದೆಯ ಅಪ್ಪಣೆ ಪಾಲಿಸುವುದಕ್ಕಿಂತ ಹೆಚ್ಚಾಗಿ ಆ ಗಿಡಮರಗಳಲ್ಲಿ ತನಗಿರುವ ಸೋದರ ಸ್ನೇಹದಿಂದ ಹೆಚ್ಚು ಶ್ರದ್ಧೆವಹಿಸಿ ಅವುಗಳನ್ನು ಬೆಳೆಸುವಳು. ಅಂಥ ರೂಪವತಿಯಾದ ಬಾಲೆಯು ಗಡಿಗೆ ಹೊತ್ತು ಗಿಡಗಳಿಗೆ ನೀರೆರೆಯುವುದನ್ನು ಕಂಡು ಅರಸನಿಗೆ ಸಹ್ಯವಾಗಲಿಲ್ಲ. ಅಂಥ ಕುಸುಮ ಕೋಮಲೆಯನ್ನು ಕಠಿನವಾದ ಆ ಕೆಲಸಕ್ಕೆ ನಿಯೋಜಿಸಿದ ಕಣ್ವರು ಉಚಿತಜ್ಞರಲ್ಲವೆಂದು ಅವನಿಗೆ ತೋರಿತು. "ಅವ್ಯಾಜ ಮನೋಹರಳಾದ ಈಕೆಯನ್ನು ತಪಸ್ಸಿಗೆ ಯೋಗ್ಯವಾದ ವೃತ್ತಿಯಲ್ಲಿ ತೊಡಗಿಸಿರುವುದನ್ನು ನೋಡಿದರೆ ಋಷಿಯು ಕನ್ನೈದಿಲೆಯ ಎಲೆಯಂಚಿನಿಂದ ಸಮಿಲ್ಲತೆಯನ್ನು ಕುಯ್ಯಲು ಯತ್ನಿಸಿದಂತೆ ತೋರುತ್ತದೆ" ಎಂದು ಅವನು ಆಕ್ಷೇಪಿಸಿದನು. ಆದರೆ ಶಕುಂತಲೆಯು ನಾರುಡೆಯುಟ್ಟಿರುವುದನ್ನು ಕಂಡು ಯುವತಿಯಾದ ಆಕೆಯ ರೂಪಕ್ಕೆ ಅದೇ ಒಪ್ಪುವ ಅಲಂಕಾರ ಎಂದುಕೊಂಡು, ಅವಳ ಸಹಜಸುಂದರ ರೂಪಿನಿಂದ ವಿಸ್ಮಿತನಾಗಿ ಅದರ ಪರಿಭಾವನೆಯಲ್ಲಿಯೇ ಮೈಮರೆತಿದ್ದನು.

ಇಷ್ಟರಲ್ಲಿ ಶಕುಂತಲೆಯು ತಾನೇ ಸಸಿನೆಟ್ಟು ಬೆಳೆಸಿದ ವನಜ್ಯೋತ್ಸ್ನ ಎಂಬ ಲತೆಯ ಸೊಬಗನ್ನು ಕಂಡು ಆನಂದಿಸುತ್ತಿರಲು, ಸಖಿಯಾದ ಪ್ರಿಯಂವದೆಯು ಅಣಕದ ಮಾತುಗಳಿಂದ ಅನಸೂಯೆಯ ಕಡೆ ತಿರುಗಿ, "ಶಕುಂತಲೆಯು ಈ ವನಜ್ಯೋತ್ಸ್ನೆಯನ್ನೇ ಎವೆಯಿಕ್ಕದೆ ನೋಡುತ್ತಿರುವುದೇಕೆ, ಬಲ್ಲೆಯಾ?" ಎಂದು ಕೇಳಿದಳು. ಅರ್ಥವಾಗದವಳಂತೆ ಅನಸೂಯೆಯು, "ನನಗೆ ತೋರಲಿಲ್ಲ, ನೀನೇ ಹೇಳು", ಎನ್ನಲು ಅವಳು, "ಈ ಲತೆಯು ತನಗೆ ಸದೃಶವಾದ ವೃಕ್ಷವನ್ನಾಶ್ರಯಿಸಿದಂತೆ,

ತಾನೂ ಅನುರೂಪನಾದ ವರನನ್ನು ಹೊಂದಿಯೇನೇ ಎಂದು" ಎಂದಳು. ಆ ಮಾತನ್ನು ಕೇಳಿ ಮರೆಯಲ್ಲಿದ್ದ ದುಷ್ಯಂತನು, "ಕುಲಪತಿಗಳಾದ ಕಣ್ವರಿಗೆ ಈಕೆ ಕ್ಷತ್ರಿಯ ಭಾರ್ಯೆಯಲ್ಲಿ ಜನಿಸಿದವಳಾಗಿರಬೇಕು. ಇಲ್ಲವಾದರೆ ಸುಸಂಸ್ಕೃತವಾದ ನನ್ನ ಮನಸ್ಸು ಈಕೆಯನ್ನೆಳಸುತ್ತಿರಲಿಲ್ಲ. ಸತ್ಪುರುಷರಾದವರಿಗೆ ಸಂದೇಹಕ್ಕೆಡೆಯಾದ ವಸ್ತುಗಳಲ್ಲಿ ಅಂತಃಕರಣ ಪ್ರವೃತ್ತಿಯೇ ಪ್ರಮಾಣ" ಎಂದುಕೊಂಡರೂ ನಿಜವನ್ನು ತಿಳಿಯಲು ಸಮಯವನ್ನು ನಿರೀಕ್ಷಿಸುತ್ತಿದ್ದನು.

ಅಷ್ಟರಲ್ಲಿಯೇ, ತುಂಬಿಯೊಂದು ಶಕುಂತಲೆಯ ಮುಖಕ್ಕೆರಗಲು ಆವಳು ಚಕಿತಳಾಗಿ, "ಗೆಳತಿಯರೇ, ರಕ್ಷಿಸಿರಿ. ಈ ಮಧುಕರವು ನನ್ನನ್ನು ಪೀಡಿಸುತ್ತಿದೆ" ಎಂದು ಕೂಗಿದಳು. ಗೆಳತಿಯರಿಬ್ಬರೂ ಪರಿಹಾಸದಿಂದ, "ಎಲೌ, ರಕ್ಷಿಸಲು ನಾವಾರು? ದುಷ್ಯಂತನಲ್ಲಿ ಮೊರೆಯಿಟ್ಟುಕೊ. ರಾಜನಲ್ಲವೆ ತಪೋವನಗಳನ್ನು ರಕ್ಷಿಸುವಾತನು?" ಎಂದರು. ಈ ಮಾತನ್ನು ಕೇಳಿ ದುಷ್ಯಂತನಿಗೆ ಅವಕಾಶ ದೊರಕಿದಂತಾಗಲು, ತ್ವರೆಯಿಂದ ಬಳಿಸಾರಿ, "ಪೌರವನು ವಸುಮತಿಯನ್ನು ಆಳುತ್ತಿರುವಾಗ ತಾಪಸ ಕನ್ನಿಕೆಯರಲ್ಲಿ ಅವಿನಯವನ್ನು ಆಚರಿಸುವವರಾರು?" ಎಂದನು. ಗಂಭೀರಾಕೃತಿಯುಳ್ಳವನಾದ ಅರಸನನ್ನು ನೋಡಿ, ಎಲ್ಲರಿಗೂ ಆಶ್ಚರ್ಯವಾಯಿತು. ಏನು ಮಾಡುವುದಕ್ಕೂ ತೋರದೆ ದಿಗ್ಭ್ರಾಂತರಾಗಿ ನಿಂತರು. ಅವರಲ್ಲಿ ಅನಸೂಯೆ, ಸ್ವಲ್ಪ ಧೈರ್ಯ ತಂದುಕೊಂಡು, "ಆರ್ಯ, ಪ್ರಮಾದವೇನೂ ನಡೆದಿಲ್ಲ. ಈ ನಮ್ಮ ಸಖಿಯು ಮಾತ್ರ ತುಂಬಿಯ ಹಾವಳಿಯಿಂದ ಸ್ವಲ್ಪ ಕಾತರೆಯಾದಳು" ಎಂದಳು. "ತಪಸ್ಸು ವರ್ಧಿಸುತ್ತಿರುವುದೇ?" ಎಂದು ಅರಸನು ಶಕುಂತಲೆಯನ್ನು ಕೇಳಿದನು. ಅದಕ್ಕವಳು ಯಾವ ಉತ್ತರವನ್ನೂ ಹೇಳದೆ ಸುಮ್ಮನಿರಲು, ಅನಸೂಯೆಯು, "ಶ್ರೇಷ್ಠನಾದ ಅತಿಥಿಯು ದೊರಕಿದುದರಿಂದ ಈಕೆಯ ತಪಸ್ಸು ಇದೀಗ ವರ್ಧಿಸಿತು" ಎಂದು ಹೇಳಿ, "ಶಕುಂತಲೆ, ಪರ್ಣಶಾಲೆಗೆ ಹೋಗಿ, ಫಲ ಸಹಿತ ಅರ್ಘ್ಯವನ್ನು ತೆಗೆದುಕೊಂಡು ಬಾ. ಗಡಿಗೆಯಲ್ಲಿರುವುದೇ ಪಾದೋದಕಕ್ಕೆ ಸಾಕು" ಎಂದಳು. ಅರಸನು "ಇರಲಿರಲಿ, ನಿಮ್ಮ ಸವಿನುಡಿಗಳಿಂದಲೇ

ಸತ್ಕೃತನಾಗಿದ್ದೇನೆ'' ಎನ್ನಲು, ಪ್ರಿಯಂವದೆಯು ತಣ್ಣೆಳಲ ಮರದೆಡೆಯಲ್ಲಿ ಕುಳಿತು ವಿಶ್ರಮಿಸಿಕೊಳ್ಳಬೇಕೆಂದು ಅವನನ್ನು ಪ್ರಾರ್ಥಿಸಿದಳು. ಅರಸನು ''ನೀವೂ ಗಿಡಗಳಿಗೆ ನೀರೆರೆದು ಆಯಾಸಗೊಂಡಿರುವಿರಿ. ಕುಳಿತುಕೊಳ್ಳಿರಿ'' ಎಂದು ಹೇಳಿ, ತಾನೂ ಅಲ್ಲಿಯೇ ಅವರೊಡನೆ ಕುಳಿತನು.

ಈ ವೇಳೆಗಾಗಲೆ, ಸುಂದರಾಕಾರನಾದ ದುಷ್ಯಂತನ ಪ್ರಥಮ ಸಂದರ್ಶನಮಾತ್ರದಿಂದ ಶಕುಂತಲೆಯಲ್ಲಿ ಪ್ರೇಮವು ಮೊಳೆತಿದ್ದಿತು. ಅವಳು ''ಇದೇನು ! ಈತನನ್ನು ಕಂಡೊಡನೆ ನನ್ನ ಮನಸ್ಸು ತಪೋವನಕ್ಕೆ ವಿರುದ್ಧವಾದ ಕಾಮವಿಕಾರಕ್ಕೊಳಗಾಗಿದೆ'' ಎಂದುಕೊಂಡಳು. ಎಲ್ಲರೂ ಕುಳಿತಾದಮೇಲೆ, ಅರಸನ ಪರಿಚಯಮಾಡಿಕೊಳ್ಳುವಂತೆ ಪ್ರಿಯಂವದೆ ಪ್ರೇರಿಸಲು, ಅನಸೂಯೆಯು ''ಆರ್ಯ, ತಮ್ಮ ಸವಿನುಡಿಗಳಿಂದ ಹುಟ್ಟಿದ ವಿಶ್ವಾಸವು ತಮ್ಮನ್ನು ಒಂದೆರಡು ಮಾತನ್ನು ಕೇಳಬೇಕೆನ್ನಿಸಿದೆ. ಆರ್ಯನು ಯಾವ ರಾಜರ್ಷಿ ವಂಶವನ್ನು ಅಲಂಕರಿಸಿರುವುದು ? ಯಾವ ನಾಡಿನ ಜನ ತಮ್ಮ ಅಗಲಿಕೆಯಿಂದ ಹಂಬಲಿಸುತ್ತಿರುವರು ? ಸುಕುಮಾರ ರಾದ ತಾವು ಹೀಗೆ ತಪೋವನಕ್ಕೆ ಬಿಜಮಾಡಲು ನಿಮಿತ್ತವೇನು ?'' ಎಂದು ಕೇಳಿದಳು. ಅನಸೂಯೆಯು ಹೀಗೆ ಅರಸನನ್ನು ಪ್ರಶ್ನಿಸಲು, ತಾನು ಕೋರಿದುದನ್ನೇ ಅವಳು ಕೇಳಿದಳೆಂದು ಶಕುಂತಲೆಗೆ ಬಹಳ ಸಂತೋಷ ವಾಯಿತು.

ದುಷ್ಯಂತನಿಗೆ ತನ್ನ ವಿಷಯವನ್ನು ತಾಪಸ ಕನ್ನಿಕೆಯರಿಗೆ ತಿಳಿಸು ವುದು ಹೇಗೆಂದು ಯೋಚನೆಗಿಟ್ಟುಕೊಂಡಿತು. ತನ್ನ ಪರಿಚಯವನ್ನು ಮರೆಮಾಚಿಕೊಳ್ಳಲೂ ಅವನಿಗೆ ಮನಸ್ಸು ಬರಲಿಲ್ಲ. ಸ್ವಲ್ಪ ಯೋಚಿಸಿ, ಕಡೆಗೆ ಚಮತ್ಕಾರವಾಗಿ, ''ಪೂಜ್ಯಳೇ, ಪುರುವಂಶದರಸು ಧರ್ಮಾಧಿ ಕಾರದಲ್ಲಿ ನಿಯೋಜಿಸಿರುವವನೇ ನಾನು. ಆಶ್ರಮವಾಸಿಗಳ ತಪಸ್ಸು ನಿರ್ವಿಘ್ನವಾಗಿ ನಡೆಯುವುದೇ ಎಂದು ಅರಿಯಲೋಸುಗ ಈ ಧರ್ಮಾ ರಣ್ಯಕ್ಕೆ ಬಂದೆನು'' ಎಂದನು. ಅರಸನ ನುಡಿಗಳನ್ನು ಕೇಳಿ, ಶಕುಂತಲೆಗೆ ಒಳಗೊಳಗೇ ಆನಂದವಾಯಿತು. ಮೊದಲೇ ಅವಳಲ್ಲಿ ಮೂಡಿದ್ದ ದುಷ್ಯಂತ ವಿಷಯಕವಾದ ಪ್ರೇಮವು ಮತ್ತಷ್ಟು ಬಲಿಯಿತು. ಸಖಿಯು ರಿಬ್ಬರೂ ಅವಳ ಭಾವವನ್ನರಿತು ಉತ್ಸುಕರಾಗಿ, ''ಶಕುಂತಲೆ, ಈಗ

ತಂದೆಯವರು ಇಲ್ಲಿದ್ದಿದ್ದರೆ" ಎಂದರು. ಶಕುಂತಲೆ, "ಆಗ ಏನಾಗುತ್ತಿದ್ದಿತೊ?" ಎಂದಳು. "ಅವರ ಜೀವನ ಸರ್ವಸ್ವವಾದ ನಿನ್ನನ್ನೇ ಈ ಅತಿಥಿಗಿತ್ತು ಕೃತಾರ್ಥನನ್ನಾಗಿ ಮಾಡುತ್ತಿದ್ದರು." ಸಖಿಯರ ಈ ಮಾತನ್ನು ಕೇಳಿ ಶಕುಂತಲೆ ಹುಸಿ ಮುನಿಸಿನಿಂದ, "ನೀವು ಹೊರಟು ಹೋಗಿ. ಏನೋ ಮನಸ್ಸಿನಲ್ಲಿಟ್ಟುಕೊಂಡು ಮಾತನಾಡುತ್ತಿದ್ದೀರಿ. ನಿಮ್ಮ ಮಾತು ನನಗೆ ಬೇಕಿಲ್ಲ" ಎಂದಳು.

ಬಳಿಕ ದುಷ್ಯಂತನು, ಶಕುಂತಲೆಯು ವಿಶ್ವಾಮಿತ್ರ ಮೇನಕೆಯರ ಮಗಳೆಂದೂ, ಕಣ್ವರು ಅವಳ ಸಾಕುತಂದೆಯೆಂದೂ, ಅನುರೂಪನಾದ ವರನಿಗೆ ಅವಳನ್ನು ಕೊಟ್ಟು ಮದುವೆ ಮಾಡಬೇಕೆಂಬುದು ಕಣ್ವರ ಸಂಕಲ್ಪವೆಂದೂ ಅವಳ ಗೆಳತಿಯರಿಂದ ಅರಿತುಕೊಂಡನು.

ಈ ವಿಷಯವನ್ನರಿತ ಕೂಡಲೆ ದುಷ್ಯಂತನ ಸಂತೋಷಕ್ಕೆ ಪಾರವಿಲ್ಲವಾಯಿತು. ತನ್ನ ಬಯಕೆ ಕಷ್ಟಸಾಧ್ಯವಾದುದಲ್ಲವೆಂದು ಅವನಿಗೆ ಆಗ ಗೊತ್ತಾಯಿತು. ಸಂದೇಹವು ಕಳೆಯಿತು. ಯಾವುದನ್ನು ಅಗ್ನಿಯೆಂದು ಶಂಕಿಸಿದ್ದನೋ ಅದೇ ಈಗ ಸ್ಪರ್ಶಯೋಗ್ಯವಾದ ರತ್ನವೆಂದು ತಿಳಿದನು. ಇತ್ತ ಅರಸನ ಮತ್ತು ತನ್ನ ಸಖಿಯರ ಸಂವಾದವನ್ನು ಕೇಳುತ್ತಿದ್ದ ಶಕುಂತಲೆಗೂ ಹರ್ಷವಾಯಿತು. ಆದರೂ ಅವಳು ಕಪಟಕೋಪವನ್ನು ನಟಿಸಿ, "ಅನಸೂಯೆ, ನಾನು ಹೋಗುತ್ತೇನೆ. ಅಸಂಬದ್ಧವಾಗಿ ಹರಟುತ್ತಿರುವ ಈ ಪ್ರಿಯಂವದೆಯ ವಿಚಾರವನ್ನು ಆರ್ಯೆ ಗೌತಮಿಗೆ ತಿಳಿಸುತ್ತೇನೆ" ಎಂದು ಹೊರಡಲು, ಅನಸೂಯೆಯು, "ಗೆಳತಿ, ಅತಿಥಿಗಳನ್ನು ಸತ್ಕರಿಸದೆ ಸ್ವೇಚ್ಛೆಯಾಗಿ ಹೊರಟುಹೋಗುವುದು ಆಶ್ರಮದವರಿಗೆ ತಕ್ಕುದಲ್ಲ" ಎಂದಳು. ಶಕುಂತಲೆಯು ಯಾವ ಉತ್ತರವನ್ನೂ ಕೊಡದೆ ಮುಂದುವರಿದಳು. ಆಗ ಪ್ರಿಯಂವದೆಯು ಅವಳನ್ನು ತಡೆದು, "ಎಲಾ, ನೀನು ಇನ್ನೂ ಎರಡು ಪಾತಿಗಳಿಗೆ ನೀರೆರೆಯಬೇಕಾಗಿದೆ. ಅದನ್ನು ಮುಗಿಸಿ ಬೇಕಾದರೆ ಹೋಗಬಹುದು" ಎಂದು ನಿಲ್ಲಿಸಿದಳು. ಶಕುಂತಲೆಯು ಮತ್ತೆ ಗಿಡಗಳಿಗೆ ನೀರೆರೆದು ಆಯಾಸಗೊಳ್ಳುವುದು ದುಷ್ಯಂತನಿಗೆ ಸಹ್ಯವಾಗಲಿಲ್ಲ. "ಭದ್ರೆ, ನಿಮ್ಮ ಗೆಳತಿಯು ಈಗಾಗಲೇ ಬಳಲಿದ್ದಾಳೆ. ಆದುದರಿಂದ ಆಕೆಯ ಸಾಲವನ್ನು ನಾನು ತೀರಿಸುವೆನು"

ಎಂದು ಹೇಳಿ, ಗೆಳತಿಯರ ಕಾಟದಿಂದ ಶಕುಂತಲೆಯು ಪಾರಾಗಲೆಂಬ ಉದ್ದೇಶದಿಂದ ಅರಸನು ತನ್ನ ಬೆರಳ ಉಂಗುರವನ್ನು ತೆಗೆದುಕೊಟ್ಟನು. ಸಖಿಯರಿಬ್ಬರೂ ಉಂಗುರದಮೇಲೆ ಕೆತ್ತಿದ್ದ ಅಕ್ಷರಗಳನ್ನು ಓದಿ, ಈತನೇ ದುಷ್ಯಂತನೆಂದು ಅರಿತು ಒಬ್ಬರನ್ನೊಬ್ಬರು ನೋಡಿಕೊಂಡರು. ಆಗ ಪ್ರಿಯಂವದೆಯು, "ಶಕುಂತಲೆ, ಆರ್ಯನಿಂದ ಅಥವಾ ಮಹಾರಾಜನಿಂದ ನೀನು ಬಿಡುಗಡೆಯಾದೆ. ಇನ್ನು ಹೊರಡಬಹುದು" ಎಂದಳು. ಶಕುಂತಲೆಯು ಹೊರಡುವುದಕ್ಕೂ ಇಷ್ಟಪಡದೆ, ಇರುವುದಕ್ಕೂ ಆಗದೆ "ಹೋಗೆನ್ನುವುದಕ್ಕೂ ಇರೆನ್ನುವುದಕ್ಕೂ ನೀನಾರೊ" ಎನ್ನುತ್ತ ಅಲ್ಲಿಯೇ ನಿಂತಳು. ಅರಸನು ಆಗಿನ ಅವಳ ನಿಲುವು, ನೋಟ, ಹಾವ ಭಾವ ವಿಲಾಸಗಳ ವೈಖರಿಯನ್ನು ನೋಡಿ ಮುಗ್ಧನಾಗಿ, ಅವಳು ತನ್ನಲ್ಲಿ ಅನುರಾಗವನ್ನು ಸೂಚಿಸುತ್ತಿರುವಳೆಂದು ಯೋಚಿಸುತ್ತಿರುವಂತೆಯೇ ಕಾಡಾನೆಯೊಂದು ತಪೋವನಕ್ಕೆ ನುಗ್ಗಿಬರುತ್ತಿದ್ದುದರಿಂದ ಸೈನಿಕರ ಕೋಲಾಹಲ ಕೇಳಿಸಿತು. ಅವರೆಲ್ಲರೂ ಮೃಗಯಾವಿಹಾರಿಯಾದ ದುಷ್ಯಂತ ರಾಜನನ್ನು ಅರಸುತ್ತಿದ್ದರು. ದುಷ್ಯಂತನು ತನ್ನ ಆನಂದಕ್ಕೆ ಎಡರುಬಂದುದಕ್ಕಾಗಿ ಚಿಂತಿಸಿ, ಗತ್ಯಂತರವಿಲ್ಲದೆ, "ಸೈನಿಕರು ನನ್ನನ್ನು ಹುಡುಕುತ್ತಿದ್ದಾರೆ. ನಾನು ಹೋಗಿಬರುವೆನು" ಎಂದು ಹೇಳಿ ಮುನಿಕನ್ನಿಕೆಯರಿಂದ ಬೀಳ್ಕೊಂಡು, ಶಕುಂತಲೆಯಲ್ಲಿ ನೆಟ್ಟುಹೋಗಿದ್ದ ತನ್ನ ಮನಸ್ಸನ್ನು ಕಷ್ಟದಿಂದ ಹಿಂತಿರುಗಿಸಿಕೊಂಡು ಹೊರಟನು. ಆಗ ಅವನ ಶರೀರವು ಮುಂದುಮುಂದಕ್ಕೆ ಹೋಗುತ್ತಿದ್ದರೂ ಅವನ ಮನಸ್ಸುಮಾತ್ರ ಪ್ರಿಯತಮೆಯಾದ ಶಕುಂತಲೆಯನ್ನು ಅನುಸರಿಸಿ ಹಿಂದುಹಿಂದಕ್ಕೆ ಓಡುತ್ತಿದ್ದಿತು. ಶಕುಂತಲೆಯೂ ಅರಸನನ್ನೇ ನೆಟ್ಟನೆ ನೋಡುತ್ತ ಸಖಿಯರೊಡನೆ ಹಿಂತಿರುಗಿದಳು.

ಇತ್ತ ಬೇಟೆಗೆ ಅರಸನ ಜೊತೆಯಲ್ಲಿ ಬಂದಿದ್ದ ಅವನ ಗೆಳೆಯನಾದ ಮಾಢವ್ಯನು ಯಾವಾಗ ಪಟ್ಟಣಕ್ಕೆ ಹಿಂತಿರುಗುವುದೋ ಎಂದು ಚಿಂತಿಸಿದನು; ಅವನನ್ನು ಕಂಡು ಹೇಗಾದರೂ ಮಾಡಿ ಪಟ್ಟಣಪ್ರಯಾಣಕ್ಕೆ ಅವನನ್ನು ಒಡಂಬಡಿಸಬೇಕೆಂದು ಅವನನ್ನೇ ಹುಡುಕುತಿದ್ದನು. ಬಿಸಿಲು ಗಾಳಿಗಳೆನ್ನದೆ "ಇದೋ ಹುಲ್ಲೆ ಅದೋ ಹುಲಿ! ಇದೊ ಇದೋ ಹಂದಿ"

ಎಂದು ಕೂಗಿಟ್ಟು ಕಾಡಿನಲ್ಲೆಲ್ಲ ಅಲೆಯುತ್ತಿದ್ದ ಬೇಡರ ಸಹವಾಸವು ಮಾಢವ್ಯನಿಗೆ ಸಾಕುಸಾಕಾಗಿಹೋಗಿದ್ದಿತು. ತಿನ್ನಬಾರದ್ದನ್ನೆಲ್ಲ ತಿಂದು, ಎಲೆಗಳುದುರಿ ಕೊಳೆತು ನಾರುತ್ತಿದ್ದ ನೀರನ್ನು ಕುಡಿದು ಅವನಿಗೆ ಅಸಹ್ಯವಾಗಿಹೋಗಿದ್ದಿತು. ಅಲೆದಲೆದು ಕೈಕಾಲು ಸೋತು, ನೋವು ಹತ್ತಿ ಅವನಿಗೆ ಇರುಳೆಲ್ಲ ನಿದ್ರೆಯೇ ಬರುತ್ತಿರಲಿಲ್ಲ; ಅಷ್ಟಿಷ್ಟು ನಿದ್ರೆ ಬಂದರೂ ಮಂಗಳವಾದ್ಯಗಳಿಗೆ ಪ್ರತಿಯಾಗಿ ಹಕ್ಕಿಬಿಕ್ಕರು ಕೂಗಿ ಬೇಟೆ ನಾಯಿಗಳು ಬಗುಳಿ ಅವನಿಗೆ ಎಚ್ಚರವಾಗಿಬಿಡುತ್ತಿದ್ದಿತು. ಅರಸನ ಸಹವಾಸವನ್ನು ಏಕಾದರೂ ಮಾಡಿದೆನೋ ಎನ್ನುವವರೆಗೂ ಅವನಿಗೆ ಬೇಸರವಾಗಿಹೋಗಿದ್ದಿತು. ಇಷ್ಟಾದರೂ ಅರಸನು ಪಟ್ಟಣಕ್ಕೆ ಹೋಗುವ ಸಮಾಚಾರವನ್ನೇ ಎತ್ತಿರಲಿಲ್ಲ. ಇದರಮೇಲಾಗಿ, ತಾಪಸಕನ್ನಿಕೆಯಾದ ಶಕುಂತಲೆಯು ಅರಸನ ದೃಷ್ಟಿಪಥಕ್ಕೆ ಬಿದ್ದುದಂತೂ ಅವನಿಗೆ ಕುರುವಿನ ಮೇಲೆ ಬೊಕ್ಕೆಯೆದ್ದಂತಾಗಿದ್ದಿತು. ಅಷ್ಟುಹೊತ್ತಿಗೆ ಅರಸನು ಅಲ್ಲಿಗೆ ಬಂದು, ತನ್ನ ಗೆಳೆಯನ ಆ ಸ್ಥಿತಿಗೆ ಕಾರಣವೇನೆಂದು ವಿಚಾರಿಸಿದನು. ಮಾಢವ್ಯನು, ಜೊಂಡು ಬಾಗಲು ಪ್ರವಾಹವೇ ಕಾರಣವಾದಂತೆ ತನ್ನ ಸ್ಥಿತಿ ಹಾಗಾಗಿರುವುದಕ್ಕೆ ಅರಸನೇ ಕಾರಣವೆಂದು ಹೇಳಿ, ಒಂದು ಹಗಲಾದರೂ ತನ್ನ ವಿಶ್ರಾಂತಿಗೆ ಭಂಗ ತರಕೂಡದೆಂದು ಪ್ರಾರ್ಥಿಸಿ ಕೊಂಡನು. ದುಷ್ಯಂತನು ಗೆಳೆಯನನ್ನು ಸಂತೋಷಪಡಿಸುವುದು ಕರ್ತವ್ಯ ವೆಂದು ನಿಶ್ಚಯಿಸಿ, ಬೇಟೆಯ ಪರಿವಾರವನ್ನೆಲ್ಲ ಹಿಂತಿರುಗಿಸಿದನು. ಹಿಂದಿನ ದಿನ ತಾಪಸ ಕನ್ನಿಕೆಯರು ವನಮೃಗಗಳ ಕಾಟದಿಂದ ಭೀತರಾಗಿದ್ದುದನ್ನು ಸ್ಮರಿಸಿಕೊಂಡು, ಅವನು ತಪೋವನಕ್ಕೆ ಯಾವ ತೊಂದರೆಯೂ ಇಲ್ಲದಿರಲೆಂದೇ ಪರಿವಾರದವರನ್ನು ಕಳುಹಿಸಿದುದು.

ಇಷ್ಟಾದರೂ ಮಾಢವ್ಯನಿಗೆ ನಿಶ್ಚಿಂತೆಯಾಗಿ ಕಾಲ ಕಳೆಯಲಾಗಲಿಲ್ಲ. ದುಷ್ಯಂತನು ಆಶ್ರಮ ಲಲಾಮಭೂತಳಾದ ಶಕುಂತಲೆಯ ಅನುಪಮ ಸೌಂದರ್ಯವನ್ನು ವರ್ಣಿಸತೊಡಗಿದನು. ಮಾಢವ್ಯನಿಗಂತೂ ಅವನ ವರ್ಣನೆಯು ತೀರ ವಿಚಿತ್ರವಾಗಿ ತೋರಿ, ಖಂಡಖರ್ಜೂರವನ್ನು ತಿಂದವನು ಹುಣಿಸೆಹಣ್ಣನ್ನು ಬಯಸುವಂತೆ ಅರಸನ ಅಭಿರುಚಿಯು ಮಾರ್ಪಟ್ಟಿತೆಂದು ಹಾಸ್ಯಮಾಡಿದನು. ಅದರಿಂದ ದುಷ್ಯಂತನಮೇಲೆ

ಯಾವ ಪರಿಣಾಮವೂ ಆಗಲಿಲ್ಲ. ಅವನು, "ಮಾಢವ್ಯ, ಸೃಷ್ಟಿ ಕರ್ತನಾದ ಬ್ರಹ್ಮನು ಜಗತ್ತಿನ ಸುಂದರ ಸ್ತ್ರೀಯರನ್ನೆಲ್ಲ ಮೀರಿರುವ ಸ್ತ್ರೀರತ್ನವೊಂದನ್ನು ನಿರ್ಮಿಸಬಯಸಿ, ಎಲ್ಲ ಬಗೆಯ ಸುಂದರಪದಾರ್ಥ ಗಳಲ್ಲಿಯ ಸೌಂದರ್ಯ ಭಾಗಗಳನ್ನು ಸಂಗ್ರಹಿಸಿ ಚಿತ್ರದಲ್ಲಿ ಚಿತ್ರಿಸಿ, ಜೀವಕಳೆಯನ್ನು ತುಂಬಲು ರೂಪಗೊಂಡವಳೇ ಶಕುಂತಲೆ" ಎಂದು ಹೇಳಿದನು. ಮಾಢವ್ಯನು ಈ ಮಾತುಗಳನ್ನು ಕೇಳಿ, ತನ್ನ ಗೆಳೆಯನು ಶಕುಂತಲೆಗೆ ಸಂಪೂರ್ಣವಾಗಿ ಮನಸೋತಿರುವನೆಂದು ನಿರ್ಧರಿಸಿದನು. ದುಷ್ಯಂತನು ಆಕೆಯನ್ನು ನೋಡುವ ಬಯಕೆಯಿಂದ ಮತ್ತೊಮ್ಮೆ ಆಶ್ರಮಕ್ಕೆ ಹೋಗಬೇಕೆಂದು ಬಯಸಿದರೂ ಗತ್ಯಂತರವಿಲ್ಲದೆ, ಅಲ್ಲಿಗೆ ಹೋಗಲು ಯಾವುದಾದರೂ ನೆವ ಸಿಕ್ಕೀತೇ ಎಂದು ಯೋಚಿಸುತ್ತಿದ್ದನು. ಆ ಹೊತ್ತಿಗೆ ಸರಿಯಾಗಿ ದೌವಾರಿಕನು ಕಣ್ವಾಶ್ರಮದಿಂದ ಮುನಿಗಳು ಬಂದಿರುವುದಾಗಿ ತಿಳಿಸಿದನು. ಅರಸನು ಅವರನ್ನು ಗೌರವದಿಂದ ಬರಮಾಡಿಕೊಂಡನು. ತಪಸ್ವಿಗಳು, ತಮ್ಮ ಕುಲಪತಿಗಳಾದ ಕಣ್ವರು ಆಶ್ರಮದಲ್ಲಿ ಇಲ್ಲದ ಸುಳಿವನ್ನರಿತು ರಾಕ್ಷಸರು ಯಜ್ಞಕ್ಕೆ ಅಡ್ಡಿಮಾಡು ತ್ತಿರುವರೆಂದು ಹೇಳಿ, ಕೆಲವು ದಿನ ಅರಸನು ಆಶ್ರಮದಲ್ಲಿಯೇ ಇದ್ದು ಆ ತೊಂದರೆಯನ್ನು ನಿವಾರಿಸಬೇಕೆಂದೂ ಪ್ರಾರ್ಥಿಸಿದರು. ಈ ಆಹ್ವಾನ ವನ್ನು ಕೇಳಿ ಅರಸನಿಗೆ ಅತ್ಯಾನಂದವಾಯಿತು. ಶಕುಂತಲೆಯನ್ನು ಮತ್ತೆ ಕಾಣುವೆನೆಂಬ ಉತ್ಸಾಹವು ಮೂಡಿತು. ಕೂಡಲೆ ಹೊರಟುಬರುವುದಾಗಿ ಮಾತು ಕೊಟ್ಟನು. ತಪಸ್ವಿಗಳು ಅವನನ್ನು ಹರಸಿ ಬೀಳ್ಕೊಂಡರು.

ಆ ಸಮಯಕ್ಕೆ ಸರಿಯಾಗಿ ರಾಜಧಾನಿಯಿಂದ ಕರಭಕನೆಂಬ ಓಲೆಕಾರನು ಬಂದು, ಅರಸನನ್ನು ಕಂಡು, ರಾಜಮಾತೆಯು ಉಪವಾಸ ವ್ರತವನ್ನು ಸಾಂಗಗೊಳಿಸಿ, ಪಾರಣೆಮಾಡಲುದ್ದೇಶಿಸಿರುವುದರಿಂದ, ಪಟ್ಟಣಕ್ಕೆ ಬಿಜಮಾಡಬೇಕೆಂದು ಆಕೆ ಹೇಳಿಕಳುಹಿಸಿರುವುದಾಗಿ ಅರಿಕೆ ಮಾಡಿದನು. ಅರಸನಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಒಂದು ಕಡೆ ತಪಸ್ವಿಗಳ ಕಾರ್ಯ. ಒಂದು ಕಡೆ ಗುರುಜನರ ಆಜ್ಞೆ. ಯಾವುದನ್ನೂ ಮೀರುವಂತಿಲ್ಲ. ಕಡೆಗೆ ಅವನು ಮಾಢವ್ಯನಲ್ಲಿ ತನ್ನ ತಾಯಿಗಿರುವ ಪುತ್ರವಾತ್ಸಲ್ಯವನ್ನು ಪುರಸ್ಕರಿಸಿಕೊಂಡು ಉಪಾಯವಾಗಿ ಅವನನ್ನು

ರಾಜಧಾನಿಗೆ ಕಳುಹಿಸಬಯಸಿ ಅದಕ್ಕೆ ಅವನನ್ನು ಒಪ್ಪಿಸಿದನು. ಮಾಧವ್ಯ ಸಿಗೆ ಬೇಕಾಗಿದ್ದುದೂ ಅದೇ. ಪಟ್ಟಣಕ್ಕೆ ಹಿಂತಿರುಗುವೆನಲ್ಲ ಎಂದು ಅವನಿಗೆ ಸಂತೋಷವಾಯಿತು. ಅತಿ ಚಪಲನಾದ ಮಾಧವ್ಯನು ಶಕುಂತಲಾ ವೃತ್ತಾಂತವನ್ನು ಅಂತಃಪುರದಲ್ಲಿ ತಿಳಿಸಿಯಾನೆಂದು ದುಷ್ಯಂತನು ಹೆದರಿ, "ಮಿತ್ರ, ಶಕುಂತಲೆಯ ವಿಷಯವಾಗಿ ನಾನಾಡಿದ ವಿಷಯವನ್ನೆಲ್ಲ ನಿಜವೆಂದು ನೆಚ್ಚಬೇಡ. ಅವು ಕೇವಲ ಪರಿಹಾಸಕ್ಕಾಗಿ ಆಡಿದವು" ಎಂದು ಹೇಳಿದನು. ಮಾಧವ್ಯನು "ಅಷ್ಟಲ್ಲದೆ ಮತ್ತೇನು" ಎಂದುಕೊಂಡು ಪಟ್ಟಣಕ್ಕೆ ಹೊರಟುಹೋದನು.

ಮುನಿಗಳ ಪ್ರಾರ್ಥನೆಯನ್ನು ಮನ್ನಿಸಿ ದುಷ್ಯಂತನು ಕಣ್ವಾಶ್ರಮಕ್ಕೆ ಬಂದು ಧನುಷ್ಟಂಕಾರ ಮಾತ್ರದಿಂದಲೇ ವಿಘ್ನಗಳೆಲ್ಲವನ್ನೂ ದೂರಮಾಡಿದನು. ಆ ಪಾರ್ಥಿವನ ಮಹಾಪ್ರಭಾವದಿಂದ ಇಷ್ಟಿಯು ಸಾಂಗವಾಗಿ ನೆರವೇರಿತು. ಎಲ್ಲವೂ ಮುಗಿದಮೇಲೆ ದುಷ್ಯಂತನು ಶಕುಂತಲೆಯಲ್ಲಿ ಸೇರಿಹೋಗಿದ್ದ ತನ್ನ ಮನಸ್ಸನ್ನು ಹಿಂತಿರುಗಿಸಿಕೊಳ್ಳಲಾರದೆ, ಅವಳ ಅನುಪಮ ಸೌಂದರ್ಯವನ್ನೇ ಕಣ್ಣಿಗೆ ಕಟ್ಟಿದಂತೆ ಕಂಡು, ವಿರಹವೇದನೆಗೆ ಒಳಗಾದನು. ಶಕುಂತಲೆಯನ್ನು ಕಂಡೇ ಕಾಣಬೇಕೆಂಬ ಬಯಕೆ ಪ್ರಬಲವಾಗಿ, ಉಪಾಯಾಂತರವನ್ನು ಕಾಣದೆ, ಹೇಗಾದರೂ ಅವಳ ಸಂದರ್ಶನಭಾಗ್ಯವು ತನಗೆ ಲಭಿಸೀತೆಂದು ಅವಳು ಸಂಚರಿಸುತ್ತಿದ್ದ ಎಡೆಗಳಲ್ಲೆಲ್ಲ ತಿರುಗಾಡಲು ಮೊದಲುಮಾಡಿದನು. ಕಡೆಗೆ, ಚಿರಪರಿಚಿತವಾದ ಅವಳ ಹೆಜ್ಜೆ ಗುರುತು ಒಂದೆಡೆ ಕಾಣಿಸಲು, ಅದನ್ನೇ ಅನುಸರಿಸಿ ಮುಂದುವರಿದು ಒಂದು ಬಳ್ಳಿಮನೆಯ ಬಳಿಗೆ ಬಂದನು. ಅಲ್ಲಿನ ನೋಟ ಅವನ ಕಣ್ಣುಗಳಿಗೆ ಹಬ್ಬವಾಯಿತು. ವಿರಹ ಕಾತರೆಯಾದ ಶಕುಂತಲೆಯು ಹೂ ಹಾಸಿದ ಬಂಡೆಯಮೇಲೆ ಮಲಗಿ, ವಿರಹವೇದನೆಯನ್ನು ಸಹಿಸಲಾರದೆ ಬಿಸುಸುಯ್ದು ಬೇಗುದಿಪಡುತ್ತಿದ್ದಳು. ಅನಸೂಯೆ ಪ್ರಿಯಂವದೆಯರು ತಾವರೆಯೆಲೆಯಿಂದ ಅವಳಿಗೆ ಗಾಳಿ ಹಾಕುತ್ತ ಅವಳನ್ನು ಸಂತಯಿಸುತ್ತಿದ್ದರು.

ಪ್ರಿಯಂವದೆ ಅನಸೂಯೆಯರಿಬ್ಬರೂ ಆಶ್ರಮವಾಸಿಗಳಾಗಿದ್ದುದರಿಂದ ಮದನಾವಸ್ಥೆಯ ಕುರುಹುಗಳನ್ನು ತಾವು ಕೇಳಿದ್ದಂತೆಯೇ

ಶಕುಂತಲೆಯಲ್ಲಿಯೂ ಕಂಡು, ಅದು ಹೌದೇ ಅಲ್ಲವೇ ಎಂಬುದನ್ನು ತಿಳಿದುಕೊಳ್ಳಲು "ಶಕುಂತಲೆ, ಹೀಗೇಕೆ ಸಂತಪಿಸಿ ಸವೆಯುತ್ತಿರುವೆ? ನಿನ್ನ ಈ ಮನೋವಿಕಾರಕ್ಕೆ ನಿಜವಾದ ಕಾರಣವನ್ನು ತಿಳಿದ ಹೊರತು ಏನು ಮಾಡುವುದಕ್ಕೂ ನಮಗೆ ತೋರದಾಗಿದೆ" ಎಂದು ಅವಳನ್ನು ಕೇಳಿದರು. ಶಕುಂತಲೆಯು ನಾಚಿ, ಏನೂ ಹೇಳದೆ ಕೆಲಕಾಲ ಸುಮ್ಮನಿದ್ದು ಗೆಳತಿಯರು ಬಹಳವಾಗಿ ಕೇಳಿಕೊಂಡಮೇಲೆ ಬಹು ಸಂಕೋಚದಿಂದ, ದೊರೆಯ ಸಂದರ್ಶನ ಮೊದಲುಗೊಂಡು ತನ್ನ ಮನಸ್ಸು ಅವನಲ್ಲಿ ನೆಟ್ಟು ಹೋಗಿರುವುದೆಂದು ಹೇಳಿಬಿಟ್ಟಳು; ಮರೆಯಲ್ಲಿ ನಿಂತಿದ್ದ ದುಷ್ಯಂತನಿಗೆ ಈ ಮಾತನ್ನು ಕೇಳಿ ಆನಂದವಾಯಿತು.

ಶಕುಂತಲೆಯು ಪುರುವಂಶಕ್ಕೆ ರತ್ನಪ್ರಾಯನಾದ ದುಷ್ಯಂತನಿಗೆ ತನ್ನ ಮನಸ್ಸನ್ನು ಸೂರೆಗೊಟ್ಟುದು ಗೆಳತಿಯರಿಬ್ಬರಿಗೂ ಆನಂದವನ್ನುಂಟುಮಾಡಿತು. ಹೀಗಾದುದಕ್ಕೆ ಅವರಿಗೆ ಯಾವ ಆಶ್ಚರ್ಯವೂ ಆಗಲಿಲ್ಲ. ಮಹಾನದಿಯು ಕಡಲನ್ನೇ ಸೇರುವುದೂ, ಮಾಧವೀಲತೆಯು ಇಮ್ಮಾವಿನ ಮರಕ್ಕೇ ಹಬ್ಬುವುದೂ ಲೋಕದಲ್ಲಿ ಸಹಜವೇ ಎಂದು ಅವರು ತೃಪ್ತಿಪಟ್ಟುಕೊಂಡರು.

ಶಕುಂತಲೆಗೆ ದುಷ್ಯಂತನಲ್ಲಿದ್ದ ಅಪರಿಮಿತವಾದ ಅನುರಾಗವು ಸಖಿಯರಿಗೆ ಸಂಪೂರ್ಣವಾಗಿ ಮನವರಿಕೆಯಾಯಿತಾದರೂ, ದುಷ್ಯಂತನಿಗೆ ಶಕುಂತಲೆಯಲ್ಲಿ ಅಷ್ಟೇ ಅನುರಾಗವು ಇರುವುದೇ ಇಲ್ಲವೇ ಎಂಬ ಸಂಶಯವು ಅವರಿಗೆ ಸ್ವಲ್ಪ ಚಿಂತೆಯನ್ನುಂಟುಮಾಡಿತು. ಅವರು ಬಹಳ ಯೋಚಿಸಿ ನೋಡಿ, ಆ ದೊರೆ ಶಕುಂತಲೆಯ ವಿಚಾರವನ್ನು ತಿಳಿಯಲು ತೋರಿದ ಆಸಕ್ತಿ, ಅಂದಿನಿಂದ ನಿದ್ದೆಗೆಟ್ಟವನಂತೆ ಸವೆದು ಹೋಗಿದ್ದ ಅವನ ಸ್ಥಿತಿ—ಇವೇ ಮೊದಲಾದ ಸಂಗತಿಗಳನ್ನು ಮನಸ್ಸಿಗೆ ತಂದುಕೊಂಡು, ದಿಟವಾಗಿ ಅವನೂ ಅವಳಲ್ಲಿ ಅಷ್ಟೇ ಅನುರಕ್ತನಾಗಿರಬೇಕೆಂದು ನಿಶ್ಚಯಿಸಿಕೊಂಡರು. ಹೀಗೆ ಇತ್ಯರ್ಥಮಾಡಿಕೊಂಡಮೇಲೆ ಚತುರೆಯರಾದ ಸಖಿಯರು ಆ ರಾಜರ್ಷಿಗೆ ಒಲವಿನೋಲೆಯೊಂದನ್ನು ಶಕುಂತಲೆಯಿಂದ ಬರೆಯಿಸಿದರು.

ದೂರದಿಂದಲೇ ಈ ವಿದ್ಯಮಾನಗಳನ್ನು ನೋಡುತ್ತಿದ್ದ ದುಷ್ಯಂತನು

ತನ್ನ ಪ್ರೀತಿಗೆ ಸಾರ್ಥಕತೆಯುಂಟಾಯಿತೆಂಬ ಹಿಗ್ಗಿನಿಂದ ಮುಂದೆ ಬಂದು, ಶಕುಂತಲೆಗೆ ಕಾಣಿಸಿಕೊಂಡನು. ಗೆಳತಿಯರಿಬ್ಬರೂ ಶಕುಂತಲೆಯ ಮನಃಸ್ಥಿತಿಯನ್ನು ಅವನಿಗೆ ತಿಳಿಸಿ ನಿರತಿಶಯವಾದ ಪ್ರೇಮದಿಂದ ಅವಳನ್ನು ಕಾಯ್ದುಕೊಳ್ಳಬೇಕೆಂದು ಅವನನ್ನು ಪ್ರಾರ್ಥಿಸಿದರು. ದುಷ್ಯಂತನು ತನಗೆ ಲೋಕದಲ್ಲಿ ಅತ್ಯಂತ ಪ್ರಿಯತಮರಾದವರು ಸಮುದ್ರರಶನೆಯಾದ ಉರ್ವಿ, ಪ್ರಿಯತಮೆಯಾದ ಶಕುಂತಲೆ— ಇವರಿಬ್ಬರೇ ಎಂದು ಭರವಸೆಕೊಟ್ಟನು. ಧರ್ಮಾತ್ಮನಾದ ದೊರೆಯು ಅಷ್ಟುಮಾತ್ರ ಹೇಳಿದುದರಿಂದಲೆ ಗೆಳತಿಯರಿಗೆ ಸಮಾಧಾನವಾಗಿ ಅವರು ಶಕುಂತಲೆಯನ್ನು ಅವನಿಗೊಪ್ಪಿಸಿ ತೆರಳಿದರು.

ಇಷ್ಟಾದರೂ ಮುಗ್ಧೆಯಾದ ಶಕುಂತಲೆಯು ದೊರೆಗೆ ತನ್ನನ್ನು ಅರ್ಪಿಸಿಕೊಳ್ಳಲು ಹಿಂದುಮುಂದು ನೋಡುತ್ತಿದ್ದಳು. ಪರವಶೆಯಾದ ತಾನು ಹಿರಿಯರೊಬ್ಬರನ್ನೂ ಕೇಳದೆ ಹೇಗೆ ತಾನೆ ದೊರೆಯನ್ನು ಸೇರುವುದು ಎಂದು ಅವಳ ಮನಸ್ಸು ಅಳುಕಿತು. ಆದರೆ ದುಷ್ಯಂತನು, ಹಲವು ಮಂದಿ ರಾಜಪುತ್ರಿಯರು ಗಾಂಧರ್ವರೀತಿಯಲ್ಲಿ ಪತಿಗಳನ್ನು ವರಿಸಿದ ನಿದರ್ಶನಗಳನ್ನು ಕೊಟ್ಟು ಒಡಂಬಡಿಸಿ, ಅವಳನ್ನು ವರಿಸಿದನು. ಆಶ್ರಮದಲ್ಲಿ ಕೆಲವು ದಿನಗಳು ಅವರ ದಾಂಪತ್ಯಜೀವನವು ಸವಿಯಾಗಿ ಕಳೆಯಿತು. ಆಮೇಲೆ ದುಷ್ಯಂತನು ರಾಜಧಾನಿಗೆ ಹಿಂತಿರುಗಬೇಕಾಯಿತು. ಅವನು ತನ್ನ ಮುದ್ರೆಯುಂಗುರವನ್ನು ಶಕುಂತಲೆಗೆ ಕೊಟ್ಟು, ತನ್ನ ಹೆಸರಿನ ಅಕ್ಷರಗಳನ್ನು ದಿನಕ್ಕೆ ಒಂದರಂತೆ ಓದಿಮುಗಿಸುವಷ್ಟರೊಳಗಾಗಿ ರಾಜಧಾನಿಗೆ ಅವಳನ್ನು ಕರೆಯಿಸಿಕೊಳ್ಳುವುದಾಗಿ ಮಾತುಕೊಟ್ಟು, ಅವಳನ್ನು ಸಂತಯಿಸಿ ಬೀಳ್ಕೊಂಡನು.

ದುಷ್ಯಂತನು ರಾಜಧಾನಿಗೆ ಹೊರಟುಹೋದುದು ಮೊದಲುಗೊಂಡು ಮುಗ್ಧೆಯಾದ ಶಕುಂತಲೆಯು ಅವನನ್ನೇ ಸ್ಮರಿಸುತ್ತ, ಎಲೆಮನೆಯಲ್ಲಿ ಅತ್ತಿತ್ತ ಕದಲದೆ ಪ್ರತಿಮೆಯಂತೆ ಒಂಟಿಯಾಗಿ ಕುಳಿತು ಸವಿಗನಸುಗಳನ್ನು ಕಾಣುತ್ತ ಕಾಲ ಕಳೆಯುತ್ತಿದ್ದಳು. ಅವಳ ಗೆಳತಿಯರಿಬ್ಬರಿಗೂ ಒಂದೆರಡು ಕಾರಣಗಳಿಂದ ಮನಸ್ಸು ನೆಮ್ಮದಿಯಾಗಿರಲಿಲ್ಲ. ದುಷ್ಯಂತನು ಅಂತಃಪುರವನ್ನು ಸೇರಿ, ಅಲ್ಲಿಯ ಆಕರ್ಷಣೆಗಳಿಗೆ ಒಳಗಾಗಿ

ತಮ್ಮ ಗೆಳತಿಯನ್ನು ಮರೆತೇಬಿಟ್ಟನೇನೋ ಎಂಬ ಕಳವಳವು ಅವರನ್ನು ಇರಿಯುತ್ತಿದ್ದಿತು. ಶಕುಂತಲೆಗೂ ದುಷ್ಯಂತನಿಗೂ ಆದ ಗಾಂಧರ್ವ ವಿವಾಹವನ್ನು ಪೂಜ್ಯರಾದ ಕಣ್ವರು ಒಪ್ಪುವರೋ ಇಲ್ಲವೋ ಎಂಬುದು ಅವರ ಮನಸ್ಸಿನಲ್ಲಿ ಮೂಡಿದ್ದ ಕಳವಳಕ್ಕೆ ಇನ್ನೊಂದು ಕಾರಣ. ಗಂಭೀರಾಕಾರನಾಗಿ, ಅದಕ್ಕೆ ತಕ್ಕಂತೆ ಗುಣಾಢ್ಯನಾಗಿಯೂ ಧರ್ಮಿಷ್ಠ ನಾಗಿಯೂ ಇರುವ ದೊರೆಯು ಹಾಗೆಂದಿಗೂ ಮಾಡನೆಂದು ಅವರು ಸ್ವಲ್ಪಮಟ್ಟಿಗೆ ಧೈರ್ಯ ತಂದುಕೊಂಡರು. ಅನುರೂಪನಾದ ವರನಿಗೆ ಶಕುಂತಲೆಯನ್ನು ಕೊಟ್ಟು ಮದುವೆಮಾಡಬೇಕೆಂದು ಪೂಜ್ಯ ಕಣ್ವರು ಸಂಕಲ್ಪಿಸಿದ್ದುದರಿಂದ ಅವರು ಈ ವಿವಾಹಕ್ಕೆ ಅಸಮ್ಮತಿಯನ್ನು ಸೂಚಿಸುವುದಿಲ್ಲವೆಂದು ಆ ಧೈರ್ಯವು ಬಲಗೊಂಡಿತು.

ಗೆಳತಿಯರಿಬ್ಬರೂ ಹೀಗೆ ಯೋಚಿಸುತ್ತ ಪೂಜೆಗೆ ಹೂಬಿಡಿಸಲು ತೋಟಕ್ಕೆ ಹೋದರು. ತಾಳ್ಮೆಗೆಟ್ಟು ಮುನಿಸಿನಿಂದ ನುಡಿದ ಮನುಷ್ಯ ವಾಣಿಯೊಂದು ಅವರಿಗೆ ಹೊರಗಿನಿಂದ ಕೇಳಿಸಿತು. ಅದು ದುರ್ವಾಸ ಮಹರ್ಷಿಗಳ ಧ್ವನಿಯೆಂದು ಅರಿವಾಯಿತು. ದುರ್ವಾಸರು ಆಶ್ರಮಕ್ಕೆ ಅತಿಥಿಗಳಾಗಿ ಬಂದು ಶಕುಂತಲೆಯು ಆಶ್ರಮದಲ್ಲಿದ್ದೂ ತಮ್ಮನ್ನು ಸತ್ಕರಿಸಲಿಲ್ಲವೆಂದು ರೇಗಿ, "ನೀನು ಯಾರಿಗಾಗಿ ಚಿಂತಿಸುತ್ತ ಮೈಮರೆ ತಿರುವೆಯೋ ಆ ಪುರುಷನು ನಿನ್ನನ್ನು ಮರೆತುಹೋಗಲಿ" ಎಂದು ಶಪಿಸಿ ಹೊರಟುಹೋಗುವುದರಲ್ಲಿದ್ದರು. ಅಷ್ಟರಲ್ಲಿ ಪ್ರಿಯಂವದೆಯು ಅವರ ಬಳಿಗೆ ಓಡಿ, ಕಾಲಿಗೆರಗಿ, ಶಕುಂತಲೆಯು ಆವರೆಗೂ ಯಾವ ಅಪರಾಧ ವನ್ನೂ ಮಾಡದವಳೆಂದೂ, ಮಗಳೆಂದು ಭಾವಿಸಿ ಅವಳ ಅಂದಿನ ಒಂದು ತಪ್ಪನ್ನು ಮನ್ನಿಸಿ ಅನುಗ್ರಹಿಸಬೇಕೆಂದೂ ಬೇಡಿದಳು. "ಕೊಟ್ಟ ಶಾಪ ವನ್ನು ಹಿಂತೆಗೆದುಕೊಳ್ಳಲಾಗದು. ಗುರುತಿನ ವಸ್ತುವನ್ನು ದುಷ್ಯಂತನು ಕಂಡೊಡನೆ ಶಾಪವು ಕಳೆಯುವುದು" ಎಂದು ಹೇಳಿ ದುರ್ವಾಸರು ಮರಳಿದರು.

ಗೆಳತಿಯರಿಗೆ ಸಮಾಧಾನವಾಯಿತು. ದುಷ್ಯಂತನು ರಾಜಧಾನಿಗೆ ಹಿಂತಿರುಗುವಂದು ಒಲವಿನ ಕುರುಹಾಗಿ ಶಕುಂತಲೆಗೆ ತನ್ನ ನಾಮಾಕ್ಷರ ಗಳು ಕೆತ್ತಿದ್ದ ಉಂಗುರವನ್ನು ಕೊಟ್ಟಿದ್ದನು. ಗುರುತಿಗಾಗಿ ಅದನ್ನು

ತೋರಿದರೆ ಸಾಕೆಂದು ಅವರು ಎಣಿಸಿದರು. ಋಷಿ ಶಾಪದ ಹೆದರಿಕೆ ಅವರನ್ನು ಅಷ್ಟಾಗಿ ಯೋಚನೆಗೀಡುಮಾಡಲಿಲ್ಲ. ಈ ಸಂಗತಿಯನ್ನು ಅವರು ತಮ್ಮ ಗೆಳತಿಗೆ ತಿಳಿಸುವ ಧೈರ್ಯಮಾಡಲಿಲ್ಲ. ಕುಸುಮ ಕೋಮಲೆಯಾದ ಅವಳು ಅದನ್ನು ಕೇಳಿದರೆ ಸಂಕಟಪಡುವಳೆಂದು ಅವರಿಗೆ ಗೊತ್ತು. ಎಳಸಾದ ಮಾಧವೀಲತೆಗೆ ಬಿಸಿನೀರೆರೆವುದುಂಟೆ?

ದಿನಗಳು, ವಾರಗಳು, ತಿಂಗಳುಗಳು ಉರುಳಿಹೋದುವು. ದುಷ್ಯಂತನು ತನ್ನ ಮಡದಿಯನ್ನು ಕರೆಯಿಸಿಕೊಳ್ಳಲಿಲ್ಲ. ದುರ್ವಾಸರ ಶಾಪವು ಸಂಪೂರ್ಣ ಫಲಕಾರಿಯಾಯಿತು. ದೊರೆಯು ಅವಳನ್ನು ದಿಟವಾಗಿಯೂ ಮರೆತೇಹೋದನು. ಅನಸೂಯೆ ಪ್ರಿಯಂವದೆಯರಿಗೆ ದಿಕ್ಕುಕಾಣದೆ ಹೋಯಿತು. ಯಾವ ಕೆಲಸಮಾಡಲೂ ಅವರಿಗೆ ಕೈಕಾಲೇ ಆಡದಂತಾಯಿತು. ಇದರಮೇಲೆ ಶಕುಂತಲೆಯು ಕೆಲವು ದಿನಗಳಲ್ಲಿ ತಾಯಿಯಾಗುವ ಸಂಭವ ಬೇರೆ. ಕಣ್ವರು ಆಗತಾನೆ ಸೋಮತೀರ್ಥ ದಿಂದ ಆಶ್ರಮಕ್ಕೆ ಹಿಂತಿರುಗಿ ಬಂದಿದ್ದಾರೆ. ಅವರಿಗೆ ಇವೆಲ್ಲ ತಿಳಿವರೆ ಅವಳ ಗತಿಯೇನಾಗುವುದೊ? ಅಂತೂ, ಈ ಬಗೆಯ ಸಂಶಯಗಳಿಂದ ಗೆಳತಿಯರಿಬ್ಬರ ನಿರ್ಮಲ ಹೃದಯಗಳೂ ಕಲಕಿಹೋದುವು.

ಆದರೆ ಈ ಸಂಶಯಗಳಾವುವೂ ಬಹಳ ಹೊತ್ತು ಅವರನ್ನು ಕಾಡಲಿಲ್ಲ. ಕುಲಪತಿಗಳಾದ ಕಣ್ವರು ಅಗ್ನ್ಯಾಗಾರದಲ್ಲಿ "ಶಕುಂತಲೆಯು ದುಷ್ಯಂತನನ್ನು ವರಿಸಿ ಚಕ್ರೇಶ್ವರನಾಗುವ ಪುತ್ರರತ್ನವನ್ನು ಗರ್ಭದಲ್ಲಿ ಧರಿಸಿರುವಳು" ಎಂಬ ಅಶರೀರವಾಕ್ಯನ್ನು ಕೇಳಿದರು. ಅವರ ಸಂತೋಷಕ್ಕೆ ಪಾರವಿಲ್ಲವಾಯಿತು. ನಾಚಿ, ತಲೆತಗ್ಗಿಸಿ ನಿಂತಿರುವ ಶಕುಂತಲೆಯನ್ನು ಅಪ್ಪಿಕೊಂಡು, ಅನುರೂಪನಾದ ವರನನ್ನು ವರಿಸಿದ್ದ ಕ್ಕಾಗಿ ಅವರು ಅವಳನ್ನು ಅಭಿನಂದಿಸಿದರು. ಸಚ್ಛಿಷ್ಯನಿಗೆ ವಿದ್ಯಾದಾನ ಮಾಡಿದಷ್ಟು ತೃಪ್ತಿ, ಆನಂದ ಅವರಿಗುಂಟಾದುವು. ಪರಿಣೀತೆಯಾಗಿ ರುವ ಅವಳನ್ನು ಅಂದೇ ಪತಿಗೃಹಕ್ಕೆ ಕಳುಹಿಸುವ ಏರ್ಪಾಟನ್ನು ಮಾಡಬೇಕೆಂದು ಅವರು ಸಂಕಲ್ಪಿಸಿದರು. ಗೆಳತಿಯರು ಶಕುಂತಲೆಯ ಅಗಲಿಕೆಯನ್ನು ಸಹಿಸಲಾರದೆ ಸಂತಪಿಸಿದರೂ ಪತಿವಿರಹತಪ್ತೆಯಾಗಿದ್ದ ಅವಳಿಗೆ ಸುಖವನ್ನೇ ಬಯಸಿ, ಅವಳಿಗೆ ಮಂಗಳ ಸ್ನಾನಮಾಡಿಸಿ, ವನ

ಸುಮಗಳನ್ನು ಮುಡಿಸಿ, ಪ್ರಯಾಣಕ್ಕೆ ಸಿದ್ಧಗೊಳಿಸಿದರು. ಎಲ್ಲ ಅಶುಭಗಳನ್ನೂ ದೂರಮಾಡುವ ಕೇಸರ ಕುಸುಮಗಳನ್ನು ಕಷ್ಟಪಟ್ಟು ಬಿಡಿಸಿ ತಂದು, ಮಾಲೆ ಕಟ್ಟಿ ಅವಳ ತುರುಬನ್ನು ಶೃಂಗರಿಸಿದರು. ಗೆಳತಿಯರು ಮಾಡುವ ಅಲಂಕಾರ ಮುಂದೆ ಅಪರೂಪವಾಗುವುದೆಂದೂ, ಅವರನ್ನು ಅಗಲಿಹೋಗಬೇಕೆಂದೂ ಶಕುಂತಲೆಗೆ ದುಃಖವುಕ್ಕಿ ಬಂದಿತು. ಸಂತೋಷ ಸಮಯದಲ್ಲಿ ಕಣ್ಣೀರಿಡುವುದು ಸರಿಯಲ್ಲವೆಂದು ಗೆಳತಿಯರು ಅವಳನ್ನು ಬಗೆ ಬಗೆಯಾಗಿ ಸಂತಯಿಸಿದರು. ಅಷ್ಟರಲ್ಲಿ ಕಣ್ವರ ಪ್ರಭಾವದಿಂದ ವನದೇವತೆಗಳಿತ್ತ ಆಭರಣಗಳಿಂದ ಅಲಂಕರಿಸಿಕೊಳ್ಳ ಬೇಕೆಂದು ಶಿಷ್ಯರು ಅವನ್ನು ತಂದು ಶಕುಂತಲೆಗೆ ಅರ್ಪಿಸಿದರು. ಗೆಳತಿ ಯರು ಅವನ್ನು ಶಕುಂತಲೆಗೆ ತೊಡಿಸಿ, ಪತಿಗೃಹದಲ್ಲಿ "ರಾಜಲಕ್ಷ್ಮಿ ಯನ್ನು ಸ್ಥಿರವಾಗಿ ಅನುಭವಿಸುವೆ" ಎಂಬುದಕ್ಕೆ ಇದು ನಿದರ್ಶನ ಎಂದು ತಮ್ಮ ಸಂತೋಷವನ್ನು ಸೂಚಿಸಿದರು. ಆಶ್ರಮದ ತಾಪಸಿಯ ರೆಲ್ಲರೂ ನಿಷ್ಕಲ್ಮಷ ಹೃದಯದಿಂದ ಅವಳನ್ನು ಹರಸಿದರು.

ಕುಲಪತಿಗಳಾದ ಕಣ್ವರು ಸ್ನಾನಾಹ್ನಿಕಗಳನ್ನು ಮುಗಿಸಿ, ಆಶ್ರಮಕ್ಕೆ ಬಂದು, ("ಶಕುಂತಲೆಯು ಇಂದು ಪತಿಗೃಹಕ್ಕೆ ಹೊರಟುಹೋಗುವಳು, ಇದರಿಂದ ನನ್ನ ಮನಸ್ಸು ಚಿಂತೆಗೆ ಈಡಾಗಿದೆ. ಯಾವಾಗಲೂ ಅಡವಿ ಯಲ್ಲಿ ತಪಸ್ಸುಮಾಡಿಕೊಂಡು, ಯಾವ ಸಹವಾಸವನ್ನೂ ದೂರ ಮಾಡಿರುವ ನನ್ನಂತಹವನಿಗೆ ಸಾಕಿ ಬೆಳಸಿದ ಒಲವು ಇಂತಹ ದುಃಖವನ್ನು ಉಂಟುಮಾಡಿದರೆ, ಹೊತ್ತು ಹೆತ್ತು ಸಾಕಿ ಸಲಹಿದ ತಾಯಿತಂದೆಗಳಿಗೆ ಮಗಳ ಅಗಲಿಕೆ ಇನ್ನೆಷ್ಟು ದುಃಖವನ್ನುಂಟುಮಾಡುವುದೊ") ಎಂದು ಯೋಚಿಸುತ್ತಿದ್ದರು. ಅದೇ ಸಮಯದಲ್ಲಿ ಸರ್ವಾಲಂಕೃತೆಯಾಗಿದ್ದ ಶಕುಂತಲೆಯು ಅವರ ಬಳಿಗೈದಿ ನಮಸ್ಕರಿಸಿದಳು. ಕಣ್ವರು "ಮಗಳೇ, ಯಯಾತಿಗೆ ಶರ್ಮಿಷ್ಠೆ ಬಹುಮತಿಯಾಗಿ ಚಕ್ರವರ್ತಿಯಾದ ಪುರುವನ್ನು ಪುತ್ರನನ್ನಾಗಿ ಪಡೆದಂತೆ, ನೀನು ನಿನ್ನ ಭರ್ತನಿಗೆ ಅಚ್ಚುಮೆಚ್ಚಾಗಿದ್ದು ಚಕ್ರವರ್ತಿಯಾಗುವ ಮಗನನ್ನು ಪಡೆ" ಎಂದು ಆಶೀರ್ವದಿಸಿದರು. ಅವಳಿಗೆ ಅದು ಆಶೀರ್ವಾದಕ್ಕಿಂತಲೂ ವರವೇ ಆಗಿ ಪರಿಣಮಿಸಿತೆಂದು ಗೌತಮಿ ಮೊದಲಾಗಿ ಎಲ್ಲರೂ ಆನಂದಪಟ್ಟರು.

ಶಕುಂತಲೆಯೊಡನೆ ಅಗ್ನಿವೇದಿಗೆ ಪ್ರದಕ್ಷಿಣೆ ಮಾಡಿದ ತರುವಾಯ ಕುಲಪತಿಗಳು ಆಶ್ರಮದಿಂದ ಹೊರಬಂದು ಶಕುಂತಲೆಯ ಹೊಯ್ನೀರಿನಿಂದ ಬೆಳೆದ ತರುಲತೆಗಳನ್ನೂ ಆಶ್ರಮ ವೃಕ್ಷಗಳನ್ನೂ ಕಂಡು, ಅವುಗಳನ್ನು ಕುರಿತು "ಯಾರು ನಿಮಗೆ ನೀರೆರೆವವರೆಗೂ ಜಲಪಾನ ಮಾಡುತ್ತಿರಲಿಲ್ಲವೊ, ಅಲಂಕಾರಪ್ರಿಯೆಯಾದರೂ ನಿಮ್ಮಲ್ಲಿನ ನೇಹದಿಂದ ಚಿಗುರು ಬಿಡಿಸುತ್ತಿರಲಿಲ್ಲವೊ, ನಿಮ್ಮ ಕುಸುಮಪ್ರಸೂತಿಸಮಯವೇ ಯಾರಿಗೆ ಉತ್ಸವವಾಗುತ್ತಿದ್ದಿತೋ ಆ ನಿಮ್ಮ ಶಕುಂತಲೆ ಈಗ ಪತಿಗೃಹಕ್ಕೆ ಹೋಗುತ್ತಿರುವಳು. ನೀವೆಲ್ಲರೂ ಬೀಳ್ಕೊಡಿರಿ" ಎಂದು ಹೇಳಿ, ಅದಕ್ಕೆ ಪಡಿನುಡಿಯೋ ಎಂಬಂತೆ ಕೋಕಿಲ ಧ್ವನಿ ಕೇಳಬರಲು, ಶುಭ ಸೂಚನೆಯಾಯಿತೆಂದು ಸಂತೋಷಪಡುತ್ತಿದ್ದರು.

"ಪ್ರಯಾಣ ಹೊರಟಿರುವ ಮಾರ್ಗದಲ್ಲಿ ಕಮಲಸರಸ್ಸುಗಳು ಕಣ್ಗೆಂಪಾಗಿ, ಛಾಯಾದ್ರುಮಗಳು ಬಿಸಿಲು ತಾಕದಂತೆ ಶಾಖೆಗಳನ್ನು ಹರಡಿ, ಕಮಲಧೂಳಿಯುದುರಿ ಅಡಿಯಿಡಲು ನೆಲವು ಮೆತ್ತಗಿದ್ದು, ಮಲಯಮಾರುತ ಬೀಸಿ ಮಂಗಳಕರವಾಗಿರುತ್ತದೆ" ಎಂದು ಬಾನ್‌ದನಿ ಕೇಳಬರಲು, ಬಳಿಯಲ್ಲಿದ್ದ ಗೌತಮಿಯು, "ಮಗು, ತಪೋವನ ದೇವತೆಗಳು ನಿನ್ನ ಮೇಲಣ ಪ್ರೇಮದಿಂದ, ಪ್ರಯಾಣಕ್ಕೆ ಅಪ್ಪಣೆಕೊಟ್ಟಿರುವರು, ಅವರಿಗೆ ನಮಸ್ಕರಿಸು" ಎಂದಳು. ಶಕುಂತಲೆಯು ಭಕ್ತಿಯಿಂದ ನಮಸ್ಕರಿಸಿ ನಿಂತಳು.

ಪತಿದರ್ಶನದಲ್ಲಿ ಉತ್ಸುಕಳಾಗಿದ್ದರೂ ಆಶ್ರಮಪದವನ್ನು ತೊರೆದು ಹೋಗುವುದು ಶಕುಂತಲೆಗೆ ಬಹು ಕಷ್ಟವಾಯಿತು. ಅವಳ ಮನಸ್ಸು ತಪಿಸಿಹೋಗಿದ್ದಿತು. ಅಂತೆಯೇ ತಪೋವನಕ್ಕೆ ತಪೋವನವೇ ಅವಳೊಡನೆ ಮರುಗುತ್ತಿದ್ದಿತು. ಆಶ್ರಮದ ಜಿಂಕೆಗಳು ಮೇವುಳಿದು, ನವಿಲುಗಳು ಕುಣಿತವುಳಿದು ಚಲಿಸದೆ ನೆಟ್ಟ ಕಂಗಳಿಂದ ಅವಳನ್ನೇ ನೋಡುತ್ತ ನಿಂತುವು. ವೃಕ್ಷಗಳು ಕಂಬನಿಗರೆವಂತೆ ಹಣ್ಣೆಲೆಗಳನ್ನು ಉದುರಿಸಿದುವು. ಶಕುಂತಲೆಯು ಮನಸ್ಸಿಲ್ಲದ ಮನಸ್ಸಿನಿಂದ ಹೆಜ್ಜೆಯಿಡುತ್ತ, ವನಜ್ಯೋತ್ಸ್ನೆಯೆಂದು ಹೆಸರಿಟ್ಟು ಬೆಳಸಿದ್ದ ತನ್ನ ಮುದ್ದು ಮಲ್ಲಿಗೆಯ ಬಳಿಸಾರಿ, "ವನಜ್ಯೋತ್ಸ್ನೆ, ಇಮ್ಮಾವನ್ನು ನೆಮ್ಮಿರುವ ನಿನ್ನ ಬಳ್ಳಿತೋಳುಗಳಿಂದ

ನನ್ನನ್ನೊಮ್ಮೆ ಅಪ್ಪಿಕೊ. ಇದುವೊದಲು ನಿನ್ನನ್ನು ಬಿಟ್ಟು ದೂರ ದೇಶಕ್ಕೆ ಹೋಗುತ್ತಿರುವ ನನ್ನನ್ನು ಬೀಳ್ಕೊಡು'' ಎಂದು ಹೇಳಿ ಕಂಬನಿದುಂಬಿದಳು. ತಂದೆ ಕಣ್ವರು, ''ವತ್ಸೆ, ದುಃಖಿಸಬೇಡ. ಈ ವನಜ್ಯೋತ್ಸ್ನೆಯನ್ನೂ ನಿನ್ನನ್ನೂ ಸಮಸಮವಾಗಿ ಪ್ರೀತಿಸುತ್ತಿದ್ದೆ. ಮೊದಲೆ ನಾನು ಸಂಕಲ್ಪಿಸಿದ್ದಂತೆ ನೀನು ಅನುರೂಪನಾದ ಭರ್ತನನ್ನು ಸೇರಿದೆ. ಇದು ಇವನ್ನಾವನ್ನು ನೆಮ್ಮಿತು. ನನಗಿನ್ನು ಚಿಂತೆಯಿಲ್ಲ. ಪ್ರಯಾಣಕ್ಕೆ ಸಿದ್ಧಳಾಗು'' ಎಂದರು. ಅದನ್ನು ಕೇಳುತ್ತಲೆ ಶಕುಂತಲೆಯು ತನ್ನ ಗೆಳತಿಯರಿಬ್ಬರನ್ನೂ ನೋಡಿ, ''ಇದೋ ಈ ವನಜ್ಯೋತ್ಸ್ನೆಯನ್ನು ನಿಮ್ಮಿಬ್ಬರಿಗೂ ಒಪ್ಪಿಸಿರುವೆನು'' ಎಂದಳು. ಅವರು, ''ಗೆಳತಿ, ನಮ್ಮನ್ನು ಯಾರಿಗೆ ಒಪ್ಪಿಸಿದೆ?'' ಎಂದು ಹೇಳಿ, ಉಕ್ಕಿಬರುವ ದುಃಖದಿಂದ ಕಂಬನಿಗರೆದರು. ಆಗ ಕಣ್ವರು, ''ಅನಸೂಯೆ, ಅಳಬೇಡ. ಪ್ರಿಯಂವದೆ, ಪ್ರಯಾಣ ಸಮಯದಲ್ಲಿ ನಿಮ್ಮ ಗೆಳತಿಗೆ ಧೈರ್ಯ ಹೇಳಬೇಕಾದ ನೀವೇ ಅಳಬಹುದೆ?'' ಎಂದು ಸಂತಯಿಸಿದರು.

ಎಲ್ಲರೂ ಸ್ವಲ್ಪ ದೂರ ಬಂದಮೇಲೆ ಶಕುಂತಲೆಯು ತಂದೆ ಕಣ್ವರನ್ನು ಕುರಿತು, ''ಅಪ್ಪ! ತೆನೆಯಾದ ಈ ಹೆಣ್ಣು ಜಿಂಕೆಯು ಮರಿಹಾಕಿದೊಡನೆ ನನಗೆ ಸುದ್ದಿ ಕಳುಹಿಸಬೇಕು'' ಎಂದಳು. ಅವರು ಒಪ್ಪಿ ಅವಳನ್ನು ಸಂತಯಿಸಿ ಮುಂದುವರಿಯುತ್ತಿರಲು, ಅವಳ ಸೆರಗನ್ನು ಯಾವುದೋ ಪ್ರಾಣಿ ಸೆಳೆದಂತಾಯಿತು. ಏನೆಂದು ತಿರುಗಿನೋಡಲು, ಪುತ್ರ ವಾತ್ಸಲ್ಯಕ್ಕಿಂತಲೂ ಮಿಗಿಲಾಗಿ ಅವಳು ಸಾಕಿ ಬೆಳೆಯಿಸಿದ್ದ ಮುದ್ದು ಜಿಂಕೆ. ತಾಯನ್ನಗಲಿದ ಅದಕ್ಕೆ ತಿನಿಸುಕೊಟ್ಟು, ಅದರ ಗಾಯಗಳೆಲ್ಲವನ್ನೂ ಮಾಯಿಸಿ, ತಾಯಿಗಿಂತಲೂ ಹೆಚ್ಚು ಮಮತೆಯಿಂದ ಅವಳದನ್ನು ಸಾಕಿದ್ದಳು. ಅದನ್ನು ಅಗಲಿಹೋಗುವುದು ಅವಳಿಗೆ ಬಹಳ ಕಷ್ಟವಾಯಿತು. ದುಃಖವಿಮ್ಮಡಿಸಿತು. ಅಳುತಳುತ, ''ಮಗೂ, ನಿನ್ನ ಸಹವಾಸವನ್ನೇ ತೊರೆದುಹೋಗುತ್ತಿರುವ ನನ್ನನ್ನೇಕೆ ಅನುಸರಿಸಿ ಬರುತ್ತಿರುವೆ? ಎಳಮೆಯಲ್ಲಿ ತಾಯನ್ನೇ ಅಗಲಿ ಬದುಕಿದೆಯಂತೆ. ಈಗ ನನ್ನನ್ನಗಲಿ ಬದುಕಲಾರೆಯ? ತಂದೆಯವರೇ ನಿನ್ನ ಸಂರಕ್ಷಣೆಯನ್ನು ನೋಡಿಕೊಳ್ಳುವರು, ಹೋಗು, ಅವರಿಗೆ ಮಗನಾಗಿ ಬಾಳು''

ಎಂದಳು. ಆಗ ಕಣ್ವರು ಅವಳ ಮನಸ್ಸಿನ ಸ್ಥಿತಿಯನ್ನು ನೋಡಿ, "ವತ್ಸೆ, ಕಂಬನಿಗರೆಯದಿರು, ದಾರಿ ನೋಡಿ ನಡೆ. ಹಳ್ಳ ತಿಟ್ಟುಗಳಿವೆ" ಎಂದು ಅವಳನ್ನು ಸಮಾಧಾನಪಡಿಸಿ ನಡೆಯಿಸಿಕೊಂಡು ಹೊಳೆಯವರೆಗೆ ಬಂದರು.

ಪ್ರಯಾಣಕ್ಕೆ ಬೀಳ್ಕೊಡುವವರು ಮೊದಲ ಹೊಳೆವರೆಗೆ ಮಾತ್ರ ಹಿಂಬಾಲಿಸಬೇಕೆಂದು ಶಾಸ್ತ್ರ. ಕುಲಪತಿಗಳು ಶಕುಂತಲೆಯನ್ನು ಅಲ್ಲಿಂದಲೇ ಕಳುಹಿಸಿಕೊಡಲು ಮನಸ್ಸುಮಾಡಿ ಅಲ್ಲಿಯೇ ಇದ್ದ ಆಲದ ಮರದಡಿಯಲ್ಲಿ ನಿಂತು, ದುಷ್ಯಂತ ಮಹಾರಾಜನಿಗೆ ತಮ್ಮ ಸಂದೇಶವನ್ನು ಶಾರ್ಙ್ಗರವನೊಡನೆ ಹೇಳಿಕಳುಹಿಸಲು ನಿಶ್ಚಯಿಸಿದರು. ಅವರು "ವತ್ಸ, ಶಕುಂತಲೆಯನ್ನು ದುಷ್ಯಂತನಿಗೆ ಒಪ್ಪಿಸಿ, ಆತನಿಗೆ ನನ್ನ ಈ ಮಾತುಗಳನ್ನು ತಿಳಿಸು: ತಪಸ್ವಿಗಳಾದ ನಮ್ಮನ್ನೂ ನಿನ್ನ ಮಹಾವಂಶವನ್ನೂ ಶಕುಂತಲೆಗೆ ನಿನ್ನಲ್ಲಿರುವ ಗಾಢವಾದ ಪ್ರೇಮವನ್ನೂ ಮನ್ನಿಸಿ, ಈಕೆಯನ್ನು ಬಹುಮಾನ ಪುರಸ್ಸರವಾಗಿ ಕಾಣಬೇಕು. ವಧೂಬಂಧುಗಳು ಹೇಳಬೇಕಾದುದು ಇಷ್ಟು ಮಾತ್ರವೆ. ಉಳಿದುದೆಲ್ಲ ಭಾಗ್ಯಾಯತ್ತ. ಅದಕ್ಕೆ ನಾವು ಹೊಣೆಯಲ್ಲ" ಎಂದರು.

ಮಹರ್ಷಿಗಳು ತಮ್ಮ ಮಗಳು ಶಕುಂತಲೆಗೂ ಕೆಲ ಮಾತುಗಳನ್ನು ಹೇಳಬಯಸಿದರು. ಅವರು ಕೇವಲ ಆರಣ್ಯಕರಾದರೂ ಲೋಕವ್ಯವಹಾರವನ್ನು ಚೆನ್ನಾಗಿ ಬಲ್ಲವರು. ತಪಸ್ಸಿನಿಂದ ಸರ್ವಜ್ಞರಾಗಿರುವವರಿಗೆ ತಿಳಿಯದ ವಿಚಾರವೇನಿದೆ? ಶಕುಂತಲೆಯನ್ನು ಸಂಬೋಧಿಸಿ, "ಮಗು, ನೀನು ಪತಿಗೃಹಕ್ಕೆ ತೆರಳುತ್ತಿರುವೆ. (ಅಲ್ಲಿನ ನಡವಳಿಯನ್ನು ನೀನು ತಿಳಿಯಬೇಕು. ಗುರುಜನರ ಶುಶ್ರೂಷೆಯನ್ನು ತಪ್ಪದೆ ಮಾಡು. ನಿನ್ನ ಪತಿದೇವನ ಪ್ರೇಮಕ್ಕೆ ಸಹಭಾಗಿನಿಯರಾದ ಸಪತ್ನೀ ಜನರಲ್ಲಿ ಗೆಳತಿಯಾಗಿ ನಡೆ. ಭರ್ತನು ಮುನಿದರೂ, ಅದನ್ನು ಮನಸ್ಸಿಗೆ ತಂದುಕೊಂಡು ಎದುರು ನಡೆಯಬೇಡ. ಊಳಿಗದವರಲ್ಲಿ ವಿಶ್ವಾಸದಿಂದಿರು. ಭಾಗ್ಯಸಮಯಗಳಲ್ಲಿ ಗರ್ವಿಸಬೇಡ. ಹೀಗೆ ನಡೆದರೆ ಎಲ್ಲರೂ ನಿನ್ನನ್ನು ಒಳ್ಳೆಯ ಗೃಹಿಣಿ ಎಂದು ಬಹುಮಾನಿಸುತ್ತಾರೆ. ಇದಕ್ಕೆ ವಿರುದ್ಧವಾಗಿ ನಡೆಯುವವರು ನಿಂದೆಗೆ ಒಳಗಾಗಬೇಕಾಗುವುದು") ಎಂದರು. ಶಕುಂತಲೆಯು

ಭಕ್ತಿನಮ್ರೆಯಾಗಿ ಅವರಿಗೆ ನಮಸ್ಕರಿಸಿ, ಆ ಉಪದೇಶವನ್ನು ಪ್ರಸಾದವಾಗಿ ಕೈಕೊಂಡಳು.

ಶಕುಂತಲೆಗೆ ತನ್ನ ಗೆಳತಿಯರಿಬ್ಬರನ್ನೂ ತನ್ನೊಡನೆ ಕರೆದೊಯ್ಯುವ ಆಸೆ ಬಹುವಾಗಿದ್ದಿತು. ಅವರನ್ನೂ ತಾನು ಅಗಲಬೇಕೆಂದು ತಿಳಿದಮೇಲೆ ಅವಳ ದುಃಖ ಹಿಡಿಸದಾಯಿತು. ಕಣ್ವರು ಕನ್ಯೆಯರಾಗಿರುವ ಅವರು ಜೊತೆಗೆ ಬರಬಾರದೆಂದೂ, ಗೌತಮಿಯು ಬರುವಳೆಂದೂ ಹೇಳಿ ಅವಳನ್ನು ಸಮಾಧಾನಗೊಳಿಸಿದರು. ಇದಾದಮೇಲೆ ತಾನು ಹುಟ್ಟಿ ಬೆಳೆದು ಬಹಳವಾಗಿ ಪ್ರೀತಿಸುತ್ತಿದ್ದ ಆಶ್ರಮುವನ್ನು ಮತ್ತಾವಾಗ ನೋಡುವೆನೋ ಎಂದು ಶಕುಂತಲೆಯ ಮನಸ್ಸು ಮಿಡಿಯಿತು. ಆಗಿನ ಅವಳ ಸ್ಥಿತಿಯು ಮಲಯಪರ್ವತವನ್ನು ಅಗಲಿದ ಚಂದನ ಲತೆಯಂತೆ ಇದ್ದಿತು. ಕಣ್ವರು ಸತ್ಕುಲಪ್ರಸೂತನಾದ ಅವಳ ಭರ್ತನು ಶ್ಲಾಘ್ಯವಾದ ರಾಜ್ಞೀಪದವಿಯಿತ್ತು ಸನ್ಮಾನಿಸಿದಮೇಲೆ ಆ ವಿಭವದಲ್ಲಿ ಅವಳು ಮಾಡಬೇಕಾದ ಕಾರ್ಯಕಲಾಪಗಳಲ್ಲಿಯೇ ಕಾಲವು ಕಳೆದುಹೋಗುವುದೆಂದೂ, ಪುತ್ರಪ್ರಸವಿನಿಯಾದ ಬಳಿಕ ಅವಳ ಹೃದಯದಲ್ಲಿ ಹೊಸ ಬೆಳಕು ಮೂಡಿ ಅಂದು ತಮ್ಮ ಅಗಲಿಕೆಯ ದುಃಖವನ್ನು ಮರೆಯುವಳೆಂದೂ ಹೇಳಿದರು. ಆ ಮಾತನ್ನು ಕೇಳುತ್ತಲೆ ಶಕುಂತಲೆ ಅವರ ಅಡಿಗೆರಗಿದಳು. ಗೆಳತಿಯರಿಬ್ಬರೂ ಅವಳನ್ನು ಅಪ್ಪಿಕೊಂಡು ಬೀಳ್ಕೊಟ್ಟರು. ಶಾರ್ಙ್ಗರವ, ಶಾರದ್ವತ, ಗೌತಮಿಯರೊಡನೆ ಶಕುಂತಲೆಯು ಪ್ರಯಾಣಕ್ಕನುವಾದಳು. ಆಗ ಸಖಿಯರಿಬ್ಬರೂ ಅವಳ ಬಳಿಗೈದಿ, "ಗೆಳತಿ, ದೊರೆಯು ನಿನ್ನನ್ನು ಗುರುತಿಸಲು ತಡಮಾಡಿದರೆ ನಾಮಾಕ್ಷರಗಳು ಕೆತ್ತಿದ ಈ ಉಂಗುರವನ್ನು ತೋರಿಸು" ಎಂದರು. ಶಕುಂತಲೆಗೆ ಭಯವಾಯಿತು. ಎದೆ ಜಗ್ಗೆಂದಿತು. ಸಖಿಯರು, "ಹೆದರಬೇಡ. 'ಸ್ನೇಹಃ ಪಾಪಶಂಕೀ.' ಅದಕ್ಕಾಗಿ ಹಾಗೆ ಹೇಳಿದೆವು" ಎಂದರು. ಆ ಹೊತ್ತಿಗೆ ಶಾರ್ಙ್ಗರವನು ಹೊರಡಲು ಹೊತ್ತಾಯಿತೆಂದು ಎಚ್ಚರಿಸಿದನು. ಶಕುಂತಲೆಯು ಮತ್ತೆ ಅಶ್ರುಮುಖಿಯಾಗಿ, "ಅಪ್ಪ, ತಪೋವನವನ್ನು ಮುಂದೆ ಇನ್ನಾವಾಗ ನೋಡುವುದು ?" ಎಂದಳು. ಕುಲಪತಿಗಳು, "ವತ್ಸೆ, ನಿನ್ನ ಭರ್ತನು ಬಹುಕಾಲ ರಾಜ್ಯಭಾರಮಾಡಿ, ಸುಖದಿಂದಿದ್ದು, ಚತುಸ್ಸಮುದ್ರ

ಮುದ್ರಿತವಾದ ಮಹೀಪಾಲನ ಭಾರವನ್ನು ಅಪ್ರತಿರಥನಾದ ನಿನ್ನ ಪುತ್ರನಿಗೆ ವಹಿಸಿ, ಶಾಂತಿಯನ್ನರಸಿ ವಾನಪ್ರಸ್ಥಾಶ್ರಮಿಯಾಗಿ ನಿನ್ನೊಡನೆ ತಪೋವನಕ್ಕೆ ಬರುವನು. ಯೋಚಿಸಬೇಡ. ಇನ್ನು ನೀನು ಹೊರಡು. ತಡಮಾಡಬೇಡ. ಮಾರ್ಗದಲ್ಲಿ ನಿನಗೆ ಮಂಗಳವಾಗಲಿ'' ಎಂದರು.

ಶಕುಂತಲೆಯು ತನ್ನ ಪರಿವಾರದೊಡನೆ ಪ್ರಯಾಣ ಬೆಳೆಸಿದಳು. ಕಣ್ವರು ಮಗಳನ್ನಗಲಿದ ದುಃಖವನ್ನು ಹೇಗೆ ಹೇಗೋ ಅಡಗಿಸಿಕೊಂಡರು. ಅವಳನ್ನು ಕಳುಹಿಸಿದಮೇಲೆ, ಕದಡಿದ್ದ ಮನಸ್ಸು ತಿಳಿಯಾದುದನ್ನು ಕಂಡು ಅವರಿಗೇ ಆಶ್ಚರ್ಯವಾಯಿತು. (ಹೆಣ್ಣು ಹೊನ್ನು ಹೆರರವು. ಕೈಹಿಡಿದವನಿಗೆ ಅವಳನ್ನು ಕಳುಹಿಸಿಕೊಟ್ಟುದಾಯಿತು. ಒತ್ತೆಯಿಟ್ಟ ಒಡವೆಯನ್ನು ಒಡೆಯನಿಗೆ ಕೊಟ್ಟವನಂತೆ ಮನಸ್ಸು ಪ್ರಶಾಂತವಾಯಿತೆಂದುಕೊಂಡು ಆಶ್ರಮದ ಕಡೆಗೆ ತೆರಳಿದರು.)

ಶಾರ್ಙ್ಗರವ ಶಾರದ್ವತರೂ, ಗೌತಮಿಯೂ ಶಕುಂತಲೆಯೊಡನೆ ಹಸ್ತಿನಾವತಿಗೆ ಬಂದರು. ಆ ಹೊತ್ತಿಗಾಗಲೇ ದುರ್ವಾಸರ ಶಾಪವು ಸಂಪೂರ್ಣವಾಗಿ ಫಲಿಸಿದ್ದಿತು. ಅರಸನು ಶಕುಂತಲೆಯನ್ನು ಮರೆತೇ ಹೋಗಿದ್ದನು. ಬಹಳ ಹಿಂದೆ ಮರೆತುಹೋದ ಯಾವುದೋ ಒಂದು ಪ್ರಿಯವಸ್ತುವನ್ನು ಅವನ ಮನಸ್ಸು ಸ್ಮರಿಸಿಕೊಳ್ಳುತ್ತಿದ್ದರೂ ಅದೇನೆಂಬುದು ಮಾತ್ರ ಹೊಳೆಯಲಿಲ್ಲ. ಒಮ್ಮೆ ಸುಖವನ್ನನುಭವಿಸಿದ ಪ್ರಾಣಿಯು ಸುಂದರ ವಸ್ತುಗಳನ್ನು ನೋಡಿಯೂ, ಮಧುರ ಶಬ್ದಗಳನ್ನು ಕೇಳಿಯೂ ಉತ್ಸಾಹಗೊಳ್ಳುತ್ತದೆ. ಅದೇ ಉತ್ಸಾಹದಿಂದಲೇ ಹಿಂದಾವಗಲೋ ಅನುಭವಿಸಿದ ಸುಖವನ್ನು ನೆನಪಿಗೆ ತಂದುಕೊಳ್ಳುತ್ತದೆ. ಇದಕ್ಕೆ ಒಂದೇ ಕಾರಣ. ಎಂದಿನದೋ ಆದ ಕೆಳೆತನ ಭಾವದಲ್ಲಿ ಸ್ಥಿರವಾಗಿ ನಿಲ್ಲುತ್ತದೆ ಎಂದು ದೊರೆ ತನ್ನಲ್ಲಿ ತಾನೇ ಯೋಚಿಸಿಕೊಳ್ಳುವನು. ಆ ಪ್ರಿಯವಸ್ತುವು ಶಕುಂತಲೆಯೇ ಆದರೂ ಅದು ಅವನ ಪ್ರಜ್ಞೆಗೆ ಅಗೋಚರವಾಗಿದ್ದಿತು.

ಅರಸನು ಈ ಸ್ಥಿತಿಯಲ್ಲಿರುವಾಗ ಕಣ್ವಾಶ್ರಮದ ತಾಪಸರು ಸ್ತ್ರೀಜನರೊಡನೆ ದಯಮಾಡಿಸಿರುವರೆಂದೂ ಕಣ್ವಮುನಿಗಳ ಸಂದೇಶ ನಿವೇದನಕ್ಕಾಗಿ ಅರಮನೆಗೆ ಚಿತ್ತೈಸಿರುವರೆಂದೂ ಕಂಚುಕಿಯು

ದೊರೆಯಲ್ಲಿ ಅರಿಕೆ ಮಾಡಿದನು. ದೊರೆಯ ಅಪ್ಪಣೆಯಂತೆ ಅವರಿಗೆ ಉಚಿತ ಸತ್ಕಾರವನ್ನು ಸಮರ್ಪಿಸಿ, ಪುರೋಹಿತ ಸೋಮರಾತನು ಅವರನ್ನು ಅಗ್ನ್ಯಾಗಾರಕ್ಕೆ ಕರೆದುತಂದನು.

ದುಷ್ಯಂತನಿಗೆ ಅಂದು ಅಧಿಕಾರ ನಿರ್ವಹಣದ ಸಲುವಾಗಿ ಸ್ವಲ್ಪ ಆಯಾಸವಾಗಿದ್ದಿತು. ಆಗ ವೈತಾಳಿಕರು, “ ಅರಸಾ, ನೀನು ಸುಖದಲ್ಲಿ ನಿರಪೇಕ್ಷನಾಗಿ ಲೋಕಕ್ಕಾಗಿ ಶ್ರಮಿಸುತ್ತಿರುವೆ. ಮರವು ಬಿಸಿಲನ್ನು ಸಹಿಸಿ ಆಶ್ರಿತರ ತಾಪವನ್ನು ಕಳೆಯುವುದಿಲ್ಲವೆ? ದಾರಿತಪ್ಪಿ ನಡೆದವರನ್ನು ನೀನು ದಂಡಧರನಾಗಿ ಶಿಕ್ಷಿಸುತ್ತಿರುವೆ, ಕಲಹವನ್ನು ಕಳೆಯುತ್ತ ರಕ್ಷಣೆಗಾಗಿ ದುಡಿಯುತ್ತ ಲೋಗರ ಧನಧಾನ್ಯ ಕ್ಷೇತ್ರ ದಾರಾಗಾರಾದಿಗಳ ನಡುವೆ ಎಷ್ಟೋ ಮಂದಿ ಬಂಧುಗಳಿದ್ದರೂ ಅರಸನಾದ ನೀನೇ ಆಪದ್ಬಂಧುವಾಗಿರುವೆ” ಎಂದು ಪ್ರೋತ್ಸಾಹಗೊಳಿಸಿದರು.

ಈ ಪ್ರೋತ್ಸಾಹಕ ವಾಕ್ಯಗಳು ಕಿವಿಗೆ ಬೀಳುತ್ತಲೆ, ರಾಜನ ಬೇಸರವೆಲ್ಲವೂ ದೂರವಾಯಿತು. ಉತ್ಸಾಹ ಉದಯಿಸಿ ಕಣ್ವಶಿಷ್ಯರನ್ನು ಕಾಣಲು ಅಗ್ನ್ಯಾಗಾರಕ್ಕೆ ಹೊರಟನು. ಕಣ್ವಮಹರ್ಷಿಗಳು ಯಾವ ಕಾರ್ಯದ ಸಲುವಾಗಿ ಶಿಷ್ಯರನ್ನು ತನ್ನಲ್ಲಿಗೆ ಕಳುಹಿಸಿರುವರೆಂಬುದು ಅವನಿಗೆ ತಿಳಿಯದು. ಋಷಿಗಳ ತಪಸ್ಸಿಗೆ ವಿಘ್ನವೇನಾದರೂ ಸಂಭವಿಸಿದೆಯೋ, ಧರ್ಮಾರಣ್ಯನಿವಾಸಿಗಳಾದ ಪ್ರಾಣಿಗಳಲ್ಲಿ ಯಾರಾದರೂ ಅವಿನಯವನ್ನಾಚರಿಸಿದರೇ, ಅಥವಾ ತನ್ನ ಯಾವ ಅಪರಾಧದಿಂದಲಾದರೂ ಆಶ್ರಮದಲ್ಲಿ ಓಷಧಿಗಳು ಮೊಳೆಯದೆ ಹೋಗಿವೆಯೋ ಎಂದು ಅವನ ಮನಸ್ಸು ತಳಮಳಗೊಂಡಿದ್ದಿತು.

ಅರಸನು ಅಗ್ನ್ಯಾಗಾರವನ್ನು ಪ್ರವೇಶಿಸುತ್ತಲೆ ಋಷಿಗಳನ್ನು ಕಂಡು, ಭಕ್ತಿನಮ್ರನಾಗಿ ಅವರಿಗೆ ನಮಸ್ಕರಿಸಿ, ಅವರ ಆಶೀರ್ವಾದಗಳನ್ನು ಪಡೆದನು. ಮುಖಕ್ಕೆ ತೆರೆಹಾಕಿಕೊಂಡಿದ್ದ ಶಕುಂತಲೆಯನ್ನು ಕಾಣುತ್ತಲೆ ಅವನಿಗೆ ಆಶ್ಚರ್ಯವಾಯಿತು. ಹಣ್ಣೆಲೆಗಳ ಮಧ್ಯದಲ್ಲಿರುವ ಕೆಂದಳಿರಂತೆ ತಪಸ್ವಿಗಳ ಮಧ್ಯದಲ್ಲಿರುವ ಅವಳನ್ನು ನೋಡಿ, ಅನುಪಮ ಲಾವಣ್ಯವತಿಯೆಂದು ತನ್ನಲ್ಲಿತಾನೇ ಸಂತೋಷಪಟ್ಟರೂ ಪರಸತಿಯನ್ನೇಕೆ ದೃಷ್ಟಿಸಿ ನೋಡಬೇಕೆಂದು ಅವನು ಅವಳ ವಿಚಾರದಲ್ಲಿ ನಿರುತ್ಸುಕ

ನಾದನು. ಕಣ್ವ ಮಹರ್ಷಿಗಳ ಸಂದೇಶವನ್ನು ತಿಳಿಯಲು ಕುತೂಹಲ ನಾಗಿ ಋಷಿಗಳನ್ನು ಕುರಿತು, ಮುನಿಗಳ ತಪಸ್ಸು ನಿರ್ವಿಘ್ನವಾಗಿ ನಡೆಯುತ್ತಿರುವುದೇ ಎಂದು ಕೇಳಿದನು. "ಮಹಾರಾಜ, ಸತ್ಪುರುಷ ನಾದ ನೀನು ರಕ್ಷಕನಾಗಿರುವಲ್ಲಿ ನಮ್ಮ ತಪಸ್ಸಿಗೆ ವಿಘ್ನವೆಂದರೇನು? ನೇಸರು ಬೆಳಗುತ್ತಿರುವಾಗ ಕತ್ತಲಿಗೆಡೆಯುಂಟೆ?" ಎಂದು ತಾಪಸರು ಹೇಳಲು, ಅರಸನು ತನಗಿರುವ ರಾಜಶಬ್ದವು ಸಾರ್ಥಕವಾಯಿತೆಂದು ಕೊಂಡು, "ಪೂಜ್ಯರಾದ ಕಣ್ವರು ಕ್ಷೇಮವೆ?" ಎಂದನು. "ತಪಸ್ಸಿದ್ಧಿ ಯುಳ್ಳವರು ಸ್ವಾಧೀನಕುಶಲರು. ಕಣ್ವರು ನಿನಗೆ ಈ ಸಂದೇಶವನ್ನು ಕಳುಹಿಸಿರುವರು. ತಾವಿಲ್ಲದ ವೇಳೆಯಲ್ಲಿ ನೀನೂ ಶಕುಂತಲೆಯೂ ಪರಸ್ಪರ ಸಮ್ಮತಿಸಿ, ಗಾಂಧರ್ವ ವಿಧಾನದಲ್ಲಿ ವಿವಾಹವಾದುದನ್ನು ಕುಲಪತಿಗಳು ಅನುಮೋದಿಸಿದರು. ಈಗ ಗರ್ಭವತಿಯಾಗಿರುವ ಈ ಶಕುಂತಲೆಯನ್ನು ಒಪ್ಪಿಸಿಕೊಳ್ಳುವುದೆಂದು ಹೇಳಿಕಳುಹಿಸಿದ್ದಾರೆ" ಎಂದು ತಾಪಸರು ನಿವೇದಿಸಿದರು.

ಅರಸನು ಈ ಮಾತುಗಳಿಗೆ ಯಾವ ಉತ್ತರವನ್ನು ಹೇಳುವನೋ ಎಂದು ಶಕುಂತಲೆಯ ಮನಸ್ಸು ತಳಮಳಗೊಂಡಿದ್ದಿತು. ಏಕೆಂದರೆ, ಅರಮನೆಯನ್ನು ಪ್ರವೇಶಿಸುವಾಗಲೇ ಬಲಗಣ್ಣು ಅದುರಿ ಅವಳಿಗೆ ಅಪಶಕುನವಾಗಿದ್ದಿತು. ಅದಕ್ಕೆ ತಕ್ಕಂತೆ ಅರಸನೂ "ಇದೇನು ನೀವು ಹೇಳುತ್ತಿರುವುದು?" ಎಂದುಬಿಟ್ಟನು. ಶಾರ್ಙ್ಗರವನು, "ನಿನಗೆ ಲೋಕ ವ್ಯವಹಾರವೆಲ್ಲವೂ ತಿಳಿದಿದೆ. ಸ್ತ್ರೀಯು ಎಷ್ಟೇ ಪತಿವ್ರತೆಯಾಗಿದ್ದರೂ ತವರುಮನೆಯಲ್ಲಿಯೇ ಇದ್ದರೆ ಅವಳನ್ನು ಜನರು ನಿಂದಿಸುವರು. ಭರ್ತನಿಗೆ ಪ್ರಿಯಳಲ್ಲದಿದ್ದರೂ ಅವನ ಬಳಿಯಲ್ಲಿಯೇ ಇದ್ದರೆ ಜನರೂ ಬಂಧುಗಳೂ ಬಹುಮಾನಿಸುವರು" ಎಂದನು.

ದುಷ್ಯಂತನಿಗೆ ಪರಮಾಶ್ಚರ್ಯವಾಯಿತು. "ನಾನು ಈಕೆಯನ್ನು ಮದುವೆಯಾಗಿರುವೆನೆ?" ಎಂದು ಕೇಳಿದನು. ಶಾರ್ಙ್ಗರವನಿಗೆ ಸ್ವಲ್ಪ ಕೋಪಬಂದಿತು. "ಅರಸ, ನೀನು ಮಾಡಿದ ಕಾರ್ಯದಲ್ಲಿ ನಿನಗೇ ತಿರಸ್ಕಾರವುಂಟಾಯಿತೆ? ಅಥವಾ ಧರ್ಮವನ್ನು ಮೀರುವ ಬುದ್ಧಿಯು ನಿನ್ನಲ್ಲಿ ಮೂಡಿತೊ? ಇಲ್ಲವೆ ನಮ್ಮನ್ನು ಅಪಮಾನಪಡಿಸಲೆಳಸುತ್ತಿರು

ವೆಯೋ? ಈ ಮೂರು ಬಗೆಯ ವಿಕಾರಗಳು ಸಾಮಾನ್ಯವಾಗಿ ಐಶ್ವರ್ಯ ದಿಂದ ಮದಿಸಿಹೋಗಿರುವವರಲ್ಲಿ ಉಂಟಾಗುತ್ತವೆ'' ಎಂದನು. ಆ ಮಾತನ್ನು ಕೇಳಿ, ದುಷ್ಯಂತನ ಮನಸ್ಸು ಹಿಂಡಿದಂತಾಯಿತು. ತಾನು ತಿರಸ್ಕಾರಕ್ಕೆ ಪಾತ್ರನಾದುದಕ್ಕಾಗಿ ಅವನು ಸಂತಪಿಸಿದನು.

ಇಷ್ಟರಲ್ಲಿ ಗೌತಮಿಯು, ಶಕುಂತಲೆಯು ಹೊದೆದಿದ್ದ ಅವಕುಂಠನ ವನ್ನು ಓಸರಿಸಿದರೆ ಅರಸನು ಅವಳನ್ನು ಗುರುತಿಸಿಯಾನೆಂದು ಹಾಗೆ ಮಾಡಿದಳು. ಅವಳ ಅನುಪಮ ಸೌಂದರ್ಯವನ್ನು ನೋಡಿಯೂ ಅರಸನು ಅವಳನ್ನು ಪರಿಗ್ರಹಿಸಲೊಪ್ಪದೆ ಮೌನದಿಂದಿದ್ದನು. ಎಷ್ಟು ಯೋಚಿಸಿದರೂ ತಾನು ಅವಳನ್ನು ಮದುವೆಯಾದುದು ಅವನ ನೆನಪಿಗೆ ಬರಲಿಲ್ಲ. ಆ ವಿಷಯವನ್ನು ಮುಕ್ತಕಂಠದಿಂದ ತಾಪಸರಿಗೆ ಹೇಳಿಯೇ ಬಿಟ್ಟನು. ಶಾರ್ಙ್ಗರವನಿಗೆ ರೋಷವು ಮಿತಿಮೀರಿತು. ''ಕಳ್ಳನು ಕದ್ದು ಬೀಳಿಸಿಕೊಂಡ ಒಡವೆಯನ್ನು ಒಡೆಯನೇ ಅವನ ಕೈಗೆ ಕೊಟ್ಟಂತೆ, ತಾವಿಲ್ಲದ ವೇಳೆಯಲ್ಲಿ ತಮ್ಮ ಮಗಳನ್ನು ಕೈಹಿಡಿದ ನಿನ್ನ ಬಳಿಗೆ ಅವಳನ್ನು ಕಳುಹಿಸಿದ ಕಣ್ವಮಹಾಮುನಿಗಳನ್ನು ಅಪಮಾನಗೊಳಿಸುವುದು ನಿನಗೆ ಎಷ್ಟು ಮಾತ್ರವೂ ಯುಕ್ತವಲ್ಲ'' ಎಂದು ಚುಚ್ಚುನುಡಿಗಳನ್ನಾಡಿದನು. ಈವರೆಗೂ ಸುಮ್ಮನೆ ನಿಂತಿದ್ದ ಶಾರದ್ವತನು ಮಾತು ಬೆಳೆಯಲು ಅವಕಾಶ ಕೊಡದೆ, ಶಕುಂತಲೆಯ ಕಡೆ ತಿರುಗಿ, ''ವತ್ಸೆ, ನಾವು ಹೇಳಬಹುದಾದು ದೆಲ್ಲವನ್ನೂ ಹೇಳಿಯಾಯಿತು. ಅರಸನೋ ಹೀಗೆ ಹೇಳುತ್ತಿರುವನು. ಈಗ ಆತನಿಗೆ ನೀನೇ ನಂಬುಗೆಯನ್ನು ಕೊಡಬೇಕಾಗಿದೆ'' ಎಂದನು.

ಅಂತಹ ಅನುರಾಗವೇ ಆ ಗತಿಗೆ ಬಂದಿತೆಂದಮೇಲೆ ತಾನು ಹೇಳಿ ಕೊಂಡಾದರೂ ಆಗುವುದೇನು? ಎಂದು ತನ್ನಲ್ಲಿ ತಾನೇ ಯೋಚಿಸಿ ದೊರೆಯನ್ನು ಕುರಿತು ಶಕುಂತಲೆಯು, ''ಪೌರವ, ಹಿಂದೆ ಆಶ್ರಮದಲ್ಲಿ ನಾನು ವಿವಾಹಕ್ಕೆ ಸಮ್ಮತಿಸದಿದ್ದಾಗ ಎಷ್ಟೋ ನಿಬಂಧನೆಗಳನ್ನು ಹೇಳಿ ಮೋಸಗೊಳಿಸಿ ಈಗ ಬೀದಿಯಲ್ಲಿ ತೊರೆಯುವುದು ನಿನಗೆ ಧರ್ಮವೆ, ಉಚಿತವೆ?'' ಎಂದಳು. ''ಶಿವ ಶಿವಾ'' ಎಂದು ಅರಸನು ಕಿವಿ ಮುಚ್ಚಿಕೊಂಡು, ''ಎಲೌ, ಏತಕ್ಕೆ ಇಂತಹ ಪಾಪವಾಕ್ಯಗಳನ್ನಾಡುವೆ?'' ಎಂದನು. ''ನಿನಗೆ ನನ್ನಲ್ಲಿ ಪರಸ್ತ್ರೀ ಶಂಕೆಯಿದ್ದರೆ ಇದೋ

ಈ ಗುರುತಿನಿಂದಾದರೂ ಅದನ್ನು ಪರಿಹರಿಸುವೆನು" ಎಂದು ಹೇಳಿ ಶಕುಂತಲೆಯು ಅರಸನು ತನಗೆ ಕೊಟ್ಟಿದ್ದ ಉಂಗುರವನ್ನು ನೋಡಿ ಕೊಂಡಳು. ಅದು ಅಲ್ಲಿರಲಿಲ್ಲ. ದಾರಿಯಲ್ಲಿ ಬರುವಾಗ ಶಕ್ರಾವತಾರ ತೀರ್ಥದಲ್ಲಿ ಕಳೆದುಹೋಯಿತೆಂಬುದು ಅವಳಿಗೆ ಆವರೆಗೂ ಗೊತ್ತಾಗದೆ ಹೋಯಿತು. ದಿಕ್ಕುತೋರದಂತಾಯಿತು. ಲಜ್ಜಿತೆಯಾಗಿ ಸುಮ್ಮನೆ ನಿಂತಳು. ಆಗಿನ ಅವಳ ದುಃಖ ವರ್ಣನಾತೀತವಾಗಿದ್ದಿತು.

ಅರಸನು ಸ್ತ್ರೀಯರಿಗೆ ಸಮಯಾನುಸಾರ ಯುಕ್ತಿಗಳು ತೋರುವುದು ಸಹಜವೇ ಎಂದು ಅವಳನ್ನು ಮೂದಲಿಸಿದನು. ವಿಧಿಯು ತನಗೆ ವಿಮುಖವಾಗಿರುವುದನ್ನು ತಿಳಿದು ದೀನದೀನೆಯಾದ ಶಕುಂತಲೆಯು ಆಶ್ರಮದಲ್ಲಿ ನಡೆದ ಕೆಲವು ವಿಷಯಗಳನ್ನಾದರೂ ತಿಳಿಸಿ ಅರಸನಿಗೆ ತನ್ನ ನೆನಪನ್ನು ತಂದುಕೊಡಲು ಮಾಡಿದ ಪ್ರಯತ್ನಗಳೆಲ್ಲವೂ ವಿಫಲವಾದುವು. ಸ್ತ್ರೀಜಾತಿಗೆ ಕೌಶಲವು ಕಲಿಸದಿದ್ದರೂ ತಾನಾಗಿಯೇ ಬರುವುದೆಂದು ಅರಸನು ಅಣಕವಾಡಿದನು. ಶಕುಂತಲೆಗೆ ಇದು ಸಹಿಸದಾಯಿತು. ಉಕ್ಕಿಬರುತ್ತಿರುವ ರೋಷದಿಂದ ಅವಳು ಅರಸನನ್ನು ಕುರಿತು, "ಅನಾರ್ಯ, ನಿನ್ನ ಅಂತಸ್ಸಿನಿಂದ ಎಲ್ಲರನ್ನೂ ಅಳೆಯು ತೊಡಗಿರುವೆ. ಹುಲ್ಲು ಮುಚ್ಚಿದ ಬಾವಿಗೆ ಎಣೆಯಾದುದು ನಿನ್ನ ಹೃದಯ. ಧರ್ಮವೆಂಬ ಸೋಗು ನಿನ್ನ ಹೃದಯದ ಕಪಟವನ್ನು ಮರೆಮಾಚಿಸಿದೆ. ಆ ನಿನ್ನ ಹೃದಯದಲ್ಲಿ ವಿಷವು ತುಂಬಿ ತುಳುಕುತ್ತಿದ್ದರೂ ನಿನ್ನ ಮಾತು ಜೇನನ್ನು ಸುರಿಸುತ್ತಿದೆ. ಅಯ್ಯೋ, ಪುರುವಂಶದ ಅರಸನೆಂದು ನಿನ್ನನ್ನು ನಂಬಿ ಮಹಾಪರಾಧಮಾಡಿದೆ" ಎಂದು ಹೇಳಿ ದುಃಖಭರವನ್ನು ತಡೆಯಲಾರದೆ ಅಳತೊಡಗಿದಳು.

ದುಷ್ಯಂತನಿಗೆ ಅವಳ ಕೋಪವು ನಿಷ್ಕಪಟವೆಂದು ತೋರಿತು. ಅವಳನ್ನು ತಾನು ಮದುವೆಯಾಗಿರಬಹುದೇ ಎಂಬ ಸಂಶಯವು ಮೂಡಿತು. ಆದರೂ ಅದು ಅಸಂಭವವೆಂದೂ ಪರವನಿತೆಯಲ್ಲಿ ಪತ್ನೀತ್ವವನ್ನು ಆರೋಪಿಸುವುದು ಪಾಪವೆಂದೂ ಅವನು ನಿರ್ಧರಿಸಿಕೊಂಡನು; "ಭದ್ರೆ, ದುಷ್ಯಂತನ ಚಾರಿತ್ರವು ಪ್ರಸಿದ್ಧವಾಗಿದೆ. ಇಂತಹ ಪಾಪಕಾರ್ಯವು ಅದರಲ್ಲಿ ಕಂಡುಬರುವುದಿಲ್ಲ" ಎಂದನು. ಶಕುಂತಲೆಯು

ಅಪಮಾನ ಲಜ್ಜೆಗಳಿಂದ ಪೀಡಿತೆಯಾಗಿ ದಿಕ್ಕುಗಾಣದೆ ಸ್ತಬ್ಧಳಾಗಿ ನಿಂತಳು. ಶಾರ್ಙ್ಗರವನು "ಹಿರಿಯರನ್ನು ಕೇಳದೆ ಸ್ವೇಚ್ಛೆಯಾಗಿ ನಡೆದರೆ ಆಗುವುದು ಹೀಗೆಯೇ. ಯಾವ ಕಾರ್ಯವನ್ನಾದರೂ ಪರೀಕ್ಷಿಸಿ ಮಾಡತಕ್ಕದ್ದು. ಅಜ್ಞಾತಹೃದಯರಲ್ಲಿ ಸೌಹೃದವು ಹಗೆಯಾಗುತ್ತದೆ" ಎಂದನು. ಅರಸನು ಆ ತಿರಸ್ಕಾರವನ್ನು ಸಹಿಸಲಾರದೆ, "ಅಯ್ಯಾ, ಈಕೆಯ ಮಾತುಗಳನ್ನು ಕೇಳಿ ನನ್ನನ್ನೇಕೆ ದೂಷಿಸುವಿರಿ" ಎನ್ನಲು, ಶಾರ್ಙ್ಗರವನು ಅಣಕದ ಮಾತುಗಳಿಂದ, "ಹುಟ್ಟಿದಂದಿನಿಂದಲೂ ಕಪಟವರಿಯದೆ ಬೆಳೆದ ಈ ಮುಗ್ಧೆಯ ಮಾತುಗಳು ನೆಚ್ಚತಕ್ಕುವಲ್ಲ. ಇತರರನ್ನು ಮೋಸಗೊಳಿಸುವುದೇ ಕುಲವಿದ್ಯೆಯಾಗಿರುವ ನಿನ್ನಂತಹರ ಮಾತುಗಳನ್ನು ಆಪ್ತವಾಕ್ಯಗಳೆಂದು ನೆಚ್ಚಬೇಕು!" ಎಂದು ಉತ್ತರವಿತ್ತನು. ಅರಸನಿಗೆ ಮನಸ್ಸು ಕದಡಿಹೋಗಿ, "ಅಯ್ಯಾ ಸತ್ಯವಾದಿಯೆ, ನೀನು ಹೇಳಿದಂತೆಯೆ ಆಗಲಿ. ನಾನು ಈಕೆಯನ್ನು ಮೋಸಗೊಳಿಸಿ ಪಡೆಯುವ ಪ್ರಯೋಜನವೇನು?" ಎನ್ನಲು ಶಾರ್ಙ್ಗರವನು, "ವಿನಿಪಾತ!" ಎಂದು ಮತ್ತಷ್ಟು ರೇಗಿ ನುಡಿದನು. ಶಾರದ್ವತನಿಗೆ ಈ ಉತ್ತರೋತ್ತರಗಳು ಸಾಕುಸಾಕಾದುವು. ಅವನು "ಮಹಾರಾಜ, ಇವಳು ನಿನ್ನ ಕಾಂತೆ. ಸ್ವೀಕರಿಸುವುದು ತ್ಯಜಿಸುವುದು ನಿನಗೆ ಸೇರಿದ್ದು. ಪತಿಯಾದವನಿಗೆ ಪತ್ನಿಯಲ್ಲಿ ಸರ್ವಾಧಿಕಾರವುಂಟು" ಎಂದು ಹೇಳಿ ಶಾರ್ಙ್ಗರವನನ್ನೂ ಗೌತಮಿಯನ್ನೂ ಹಿಂದಿಟ್ಟುಕೊಂಡು ಹೊರಟನು. "ಅಯ್ಯೋ ಈ ಕಿತವನು ನನ್ನನ್ನು ಮೋಸಗೊಳಿಸಿದನು. ನೀವೂ ನನ್ನನ್ನು ತೊರೆಯುವಿರಾ?" ಎಂದು ಶಕುಂತಲೆಯು ಅಳುತ್ತ ಹಿಂಬಾಲಿಸಿ ಬರಲು, ಶಾರ್ಙ್ಗರವನು ಉಕ್ಕಿಬರುತ್ತಿರುವ ರೋಷದಿಂದ ಸರ್ರನೆ ತಿರುಗಿ, "ದುಷ್ಟೆ, ಏನು, ಸ್ವಾತಂತ್ರ್ಯವನ್ನವಲಂಬಿಸುತ್ತಿರುವೆ? ಅರಸನು ಹೇಳುವುದು ದಿಟವಾದರೆ ಕುಲಭ್ರಷ್ಟೆಯಾಗಿರುವ ನಿನ್ನನ್ನು ಜನಕನು ಪುರಸ್ಕರಿಸುವುದಿಲ್ಲ. ಪರಿಶುದ್ಧೆಯಾಗಿ ನೀನು ಈತನನ್ನು ವರಿಸಿರುವೆಯೋ ಆದರೆ ಈತನ ಮನೆಯಲ್ಲಿ ದಾಸ್ಯವಾದರೂ ನಿನಗೆ ಯೋಗ್ಯವಾದದ್ದು. ನಿಲ್ಲು," ಎಂದು ಹೇಳಿ ಎಲ್ಲರೊಡನೆ ಹೊರಟು ಹೋದನು.

ಈವರೆಗೂ ನಡೆದ ಸಂಗತಿಗಳೆಲ್ಲವನ್ನೂ ನೋಡುತ್ತ ನಿಂತಿದ್ದ ಕುಲ ಪುರೋಹಿತನಾದ ಸೋಮರಾತನು ದೊರೆಯ ಧರ್ಮಭೀರುತೆಯನ್ನು ಕಂಡು, "ಅರಸ, ತಾಪಸರು ನಿನಗೆ ಚಕ್ರವರ್ತಿಯಾಗುವ ಪುತ್ರನಾಗುವ ನೆಂದು ಹರಸಿದ್ದಾರೆ. ಈಕೆಯು ಪ್ರಸವಿಸುವ ಪುತ್ರನು ಆ ಲಕ್ಷಣಗಳಿಂದ ಕೂಡಿದ್ದರೆ ಅಭಿನಂದಿಸಿ ಅಂತಃಪುರಕ್ಕೆ ಬರಮಾಡಿಕೊಳ್ಳುವುದೂ, ಇಲ್ಲದಿದ್ದರೆ ತಂದೆಯ ಮನೆಗೆ ಕಳುಹಿಸುವುದೂ ನಿರ್ಣಯವಾಗಿಯೆ ಇದೆ. ಹಾಗೆ ಮಾಡಬಹುದು" ಎಂದು ಹೇಳಿದನು. ದುಷ್ಯಂತನು ಅದಕ್ಕೆ ಒಪ್ಪಿದನು.

ಸೋಮರಾತನು ದುಷ್ಯಂತನಿಂದ ತಿರಸ್ಕೃತೆಯಾದ ಶಕುಂತಲೆ ಯನ್ನು ಹಿಂದಿಟ್ಟುಕೊಂಡು, ಗೃಹಾಭಿಮುಖವಾಗಿ ಹೋಗುತ್ತಿದ್ದನು. ಆಗ ಒಂದು ಆಶ್ಚರ್ಯ ನಡೆಯಿತು. ಶಕುಂತಲೆಯು ತನಗೊದಗಿದ ದೌರ್ಭಾಗ್ಯಕ್ಕಾಗಿ ಬಹುವಾಗಿ ದುಃಖಿಸಿ, ಭೂಮಿಯಾದರೂ ಬಿರಿದು ತನ್ನನ್ನು ಹುದುಗಿಸಿಕೊಳ್ಳಬಾರದೆ ಎಂದು ಗೋಳಿಡುತ್ತ, ಎರಡೂ ತೋಳುಗಳನ್ನು ಮೇಲೆತ್ತಿ ರೋದಿಸುತ್ತಿರಲು, ಅಪ್ಸರತೀರ್ಥದೆಡೆಯಿಂದ ಅಪೂರ್ವವಾದ ಸ್ತ್ರೀ ಜ್ಯೋತಿಯೊಂದು ಕಾಣಿಸಿ, ಅವಳನ್ನೆತ್ತಿಕೊಂಡು ಕಣ್ಮರೆಯಾಯಿತು.

ದುಷ್ಯಂತನಿಗೆ ಈ ವಿಚಾರವು ತಿಳಿಯಲು ಅವನಿಗೆ ಆಶ್ಚರ್ಯ ವಾಯಿತು. ಆ ದುಃಖಿನಿಗೆ ದೈವವು ನೆರವಾದುದಕ್ಕೆ ತನ್ನಲ್ಲಿ ತಾನೇ ಸಂತೋಷಪಟ್ಟುಕೊಂಡನು. ಆಕೆಯ ಮುಗ್ಧಭಾವವನ್ನು ನೆನೆದ ಅವನಲ್ಲಿ ಮೂಡಿದ್ದ ಪರಿಗ್ರಹಶಂಕೆಯು ಬಲಗೊಂಡಿತು. ಆದರೂ ಎಷ್ಟು ಯೋಚಿಸಿದರೂ ನೆನಪು ಮರಳಲಿಲ್ಲ.

ಕೆಲವು ದಿನಗಳು ಕಳೆದುವು. ಹಸ್ತಿನಾವತಿಯಲ್ಲಿ ಒಂದು ದಿನ ಸಡಗರವೋ ಸಡಗರ. ಪುರದ ಬಳಿಯಿರುವ ಶಕ್ರಾವತಾರ ನಿವಾಸಿಯಾದ ಬೆಸ್ತನೊಬ್ಬನು ದುಷ್ಯಂತ ನಾಮಾಂಕಿತವಾದ ಉಂಗುರವನ್ನು ಪೇಟೆ ಯಲ್ಲಿ ಮಾರುವ ಪ್ರಯತ್ನದಲ್ಲಿದ್ದನು. ಆಗ ನಗರ ರಕ್ಷಕನು ಅವನನ್ನು ಹಿಡಿದು, ಹೊಡೆದು, ಆ ಉಂಗುರವು ಲೋಹಿತ ಮತ್ಸ್ಯದಲ್ಲಿ ದೊರೆತ ಸಂಗತಿಯನ್ನು ಅವನಿಂದ ತಿಳಿದು ಅರಸನಿಗೆ ಅರಿಕೆಮಾಡಿದನು.

ಉಂಗುರವನ್ನು ನೋಡಿದೊಡನೆಯೇ ದುರ್ವಾಸರ ಶಾಪವು ಕಳೆದು ಹೋಯಿತು. ಅರಸನಿಗೆ ಪೂರ್ವ ವೃತ್ತಾಂತವೆಲ್ಲವೂ ನೆನಪಿಗೆ ಬಂದಿತು. ಅಬಲೆಯಾದ ಶಕುಂತಲೆಯನ್ನು ತಿರಸ್ಕರಿಸಿದ ಪಾಪಕ್ಕಾಗಿ ಪಶ್ಚಾತ್ತಾಪವು ತಾನೇ ತಾನಾಗಿ ಅವನನ್ನು ಮುತ್ತಿತು. ಬೆಸ್ತನಿಗೆ ಬಹುಮಾನ ಕೊಟ್ಟು ಕಳುಹಿಸುವಂತೆ ನಾಗರಿಕನಿಗೆ ಅಪ್ಪಣೆಮಾಡಿದನು. ಬೆಸ್ತನು ಹಿಗ್ಗಿನಿಂದ ಹೊರಟುಹೋದನು.

ಉಂಗುರ ದೊರೆತಂದಿನಿಂದ ದುಷ್ಯಂತನ ನಡವಳಿಯೇ ಬೇರೆ ಯಾಯಿತು. ಕಣ್ವಾಶ್ರಮದ ವೃತ್ತಾಂತವೆಲ್ಲವೂ ನೆನಸಿಗೆ ಬಂದು ಧರ್ಮಪತ್ನಿಯನ್ನು ನಿರಾಕರಿಸಿದುದನ್ನು ನೆನೆನೆನೆದು ಅವನು ಮನಮರು ಗಿದನು. ಅವನಿಗೆ ಸಂತೋಷವೇ ಇಲ್ಲವಾಯಿತು. ಯಾವ ಉತ್ಸವ ಉತ್ಸಾಹಗಳೂ ಅವನಿಗೆ ಬೇಡವಾದುವು. ಅನ್ನಪಾನಾದಿಗಳು ಬೇಕಾಗ ಲಿಲ್ಲ. ದುಃಖದಿಂದ ಕಂದಿ ಸೊರಗುತ್ತಿದ್ದ ಅವನಿಗೆ ನಿದ್ದೆಯೆಂಬುದೇ ಇಲ್ಲವಾಯಿತು. ರಾಜಧಾನಿಯಲ್ಲಿ ವರ್ಷಕ್ಕೊಮ್ಮೆ ನಡೆಯುತ್ತಿದ್ದ ಮದನಮಹೋತ್ಸವವನ್ನೂ ನಿಲ್ಲಿಸಿಬಿಟ್ಟನು. ಬರುಬರುತ ಅವನು ಸವೆದು ಸಿಪ್ಪೆಯಾಗಿಹೋದನು.

ದೊರೆಯ ಪ್ರಣಯವೃತ್ತಾಂತವೆಲ್ಲವೂ ಅವನ ನರ್ಮಸಚಿವನಾದ ಮಾಢವ್ಯನಿಗೆ ಗೊತ್ತಿದ್ದಿತು. ತನಗೆ ಅದನ್ನು ನೆನಪುಮಾಡಿಕೊಡ ದಿದ್ದುದಕ್ಕಾಗಿ ಅರಸನು ಅವನನ್ನು ಆಕ್ಷೇಪಿಸಿದನು. ಆದರೇನು? ಮಾಢವ್ಯನು “ಮಿತ್ರ, ನಾನು ಆ ವೃತ್ತಾಂತವನ್ನು ಮರೆತೇನೆ? ಎಲ್ಲವೂ ನನಗೆ ಗೊತ್ತಿದೆ. ಆದರೆ, ನೀನು ‘ಇದೆಲ್ಲಾ ಯಥಾರ್ಥವಲ್ಲ. ಪರಿಹಾಸಕ್ಕೆ ಆಡಿದ್ದು’ ಎಂದು ಹೇಳಿದ್ದೆ. ಮಣ್ಣುಮುದ್ದೆಯ ಬುದ್ಧಿ ಯವನಾದ ನಾನು ಅದನ್ನು ನಂಬಿ ಸುಮ್ಮನಾದೆ. ಅಥವಾ ಭವಿತವ್ಯತೆ ಹೀಗಿದ್ದಿತು. ಮಾಡುವುದೇನು?” ಎಂದುಬಿಟ್ಟನು. ದುಷ್ಯಂತನಿಗೆ ತಾನು ಮಾಡಿದ ಅಪರಾಧವು ಸಂಪೂರ್ಣವಾಗಿ ಮನವರಿಕೆಯಾಯಿತು. ವಿರಹವು ಮಿತಿಮೀರಿ, “ಮಿತ್ರ, ನನ್ನನ್ನು ರಕ್ಷಿಸು” ಎಂದು ಹೇಳಿ ಮೂರ್ಛೆಹೋಗುವುದರಲ್ಲಿದ್ದನು. ಮೇಧಾವಿಯಾದ ಮಾಢವ್ಯನು “ಅಯ್ಯಾ, ಇದೇನು? ಇದು ನಿನಗೆ ಯುಕ್ತವಲ್ಲ. ಸತ್ಪುರುಷರು

ಶೋಕಕ್ಕೆ ಅಧೀನರಾಗುತ್ತಾರೆಯೆ ? ಬೆಟ್ಟಗಳು ಬಿರುಗಾಳಿಗೆ ಚಲಿಸುತ್ತವೆಯೆ ?'' ಎಂದು ಮೊದಲಾಗಿ ಸಂತಯಿಸಿದನು.

ಮಾಢವ್ಯನು ಏನು ಹೇಳಿದರೂ ದುಷ್ಯಂತನಿಗೆ ಸಮಾಧಾನವಾಗಲಿಲ್ಲ. ತಾನು ಶಕುಂತಲೆಯನ್ನು ನಿರಾಕರಿಸಿದ ಕಾಲದಲ್ಲಿನ ಅವಳ ದೀನಾವಸ್ಥೆಯ ಚಿತ್ರವು ಅವನ ಮನಸ್ಸಿನಲ್ಲಿ ಸುಳಿಯಿತು. ತಿರಸ್ಕೃತೆಯಾಗಿ ಅವಳು ಹಿಂಬಾಲಿಸುತ್ತಿರಲು ಕಣ್ವಶಿಷ್ಯರು ನಿಲ್ಲೆಂದು ಗದರಿದಾಗ ದುಃಖಭರವನ್ನು ತಡೆಯಲಾರದೆ ಕಂಬನಿದುಂಬಿ ತನ್ನನ್ನೊಮ್ಮೆ ನೆಟ್ಟನೆ ನೋಡಿದ ನೋಟವು ಅವನನ್ನು ನಂಜುಸೋಕಿದ ಶಲ್ಯದಂತೆ ಸುಡುತ್ತಿದ್ದಿತು. ಮಾಢವ್ಯನು ಪತಿಪರಾಯಣೆಯಾದ ಶಕುಂತಲೆಯು ಮೇನಕೆಯ ಮಗಳೆಂದೂ, ಅವಳನ್ನು ಮೇನಕೆಯೇ ಕರೆದೊಯ್ದಿರಬೇಕೆಂದೂ ದುಷ್ಯಂತನಿಂದ ತಿಳಿದು, ''ಅಯ್ಯಾ, ಮಿತ್ರ, ಹಾಗಾದರೆ ನೀನು ಆಕೆಯನ್ನು ಜಾಗ್ರತೆಯಾಗಿಯೇ ನೋಡುವೆ. ಏಕೆನ್ನುವೆಯೊ ? ಪತಿಗಾಗಿ ಹಂಬಲಿಸಿ ಪರಿತಪಿಸುತ್ತಿರುವ ಶಕುಂತಲೆಯಂತಹ ಹೆಣ್ಣುಮಕ್ಕಳನ್ನು ತಾಯಿತಂದೆಗಳು ನೋಡಿಕೊಂಡು ಸುಮ್ಮನಿರುವರೆ ?'' ಎಂದು ಸಮಾಧಾನಪಡಿಸಿದನು. ದುಷ್ಯಂತನು ಇನ್ನೂ ಸಂದೇಹಿಸುತ್ತಿರಲು, ಮಾಢವ್ಯನು, ''ಕೈಬಿಟ್ಟು ಹೋಗಿದ್ದ ವಸ್ತುವು ಮತ್ತೆ ದೊರೆಯುತ್ತದೆಯೆಂಬುದಕ್ಕೆ ಉಂಗುರವೇ ತಕ್ಕ ನಿದರ್ಶನವಲ್ಲವೆ ?'' ಎಂದು ಹೇಳಿ ಸಂತಯಿಸಲು ಪ್ರಯತ್ನಿಸಿದನು. ಆದರೂ ವಂಶಾಂಕುರವಿಲ್ಲದ ದುಃಖವೂ ಅವನನ್ನು ಮುತ್ತಿ ಗರ್ಭವತಿಯಾದ ಶಕುಂತಲೆಯನ್ನು ತೊರೆದುದಕ್ಕಾಗಿ ಅವನಲ್ಲಿ ಉಂಟಾದ ಪಶ್ಚಾತ್ತಾಪವು ಮೇರೆಮೀರಿತು.

ಈವರೆಗೆ ನಡೆದುದೆಲ್ಲವನ್ನೂ ಅಪ್ಸರೆಯಾದ ಸಾನುಮತಿಯು ಅದೃಶ್ಯಳಾಗಿ ನೋಡುತ್ತಿದ್ದಳು. ಅವಳು ಮೇನಕೆಯ ಗೆಳತಿ. ಮೇನಕೆಯು ತನ್ನ ಮಗಳ ವಿಷಯದಲ್ಲಿ ರಾಜನ ಮನೋವೃತ್ತಿಯನ್ನು ತಿಳಿದುಬರಲು ಅವಳನ್ನು ಕಳುಹಿಸಿದ್ದಳು. ದುಷ್ಯಂತನು ಶಕುಂತಲೆಯನ್ನು ಸ್ಮರಿಸಿ ವಿಲಪಿಸುತ್ತಿರುವುದು, ತಾನು ಮಾಡಿದ ತಿರಸ್ಕಾರಕ್ಕಾಗಿ ಬಹುವಾಗಿ ಪಶ್ಚಾತ್ತಾಪಪಡುತ್ತಿರುವುದು, ಅವಳ ಪುನರ್ದರ್ಶನಕ್ಕಾಗಿ ಆತುರನಾಗಿರುವುದು ಸಾನುಮತಿಗೆ ತಿಳಿದಮೇಲೆ ಅವಳ ಸಂತೋಷಕ್ಕೆ ಪಾರವಿಲ್ಲವಾಯಿತು.

ಎಲ್ಲ ವಿಚಾರಗಳನ್ನೂ ಶಕುಂತಲೆಗೆ ತಿಳಿಸಿ ಅವಳನ್ನು ಸಂತಯಿಸಬಯಸಿ ಹೊರಟುಹೋದಳು.

ಪಶ್ಚಾತ್ತಾಪಪೀಡಿತನಾಗಿದ್ದ ದುಷ್ಯಂತನಿಗೆ ಹೃದಯವನ್ನು ಮತ್ತಷ್ಟು ಕಲಕುವಂತಹ ಇನ್ನೊಂದು ಸನ್ನಿವೇಶವು ಪ್ರಾಪ್ತವಾಯಿತು. ಮಂತ್ರಿಯಾದ ಪಿಶುನನು ಧನಮಿತ್ರನೆಂಬ ವರ್ತಕನು ಸಮುದ್ರದಲ್ಲಿ ಓಡೆಯೊಡೆದು ಮಡಿದನೆಂದೂ, ಆತನಿಗೆ ಸಂತಾನವಿಲ್ಲದಿದ್ದುದರಿಂದ ಅವನ ಆಸ್ತಿಯೆಲ್ಲ ರಾಜನಿಗೆ ಸೇರತಕ್ಕುದೆಂದೂ ಒಂದು ವ್ಯವಹಾರವನ್ನು ತೀರ್ಪಿಗಾಗಿ ಪತ್ರಮುಖೇನ ಅರಸನ ಬಳಿಗೆ ಕಳುಹಿಸಿದನು. ಅದನ್ನು ನೋಡಿ ಅರಸನು, ಸಂತಾನಹೀನತೆಯು ಎಷ್ಟು ದುಃಖಕರ ಎಂದುಕೊಂಡು, ಧನಮಿತ್ರನ ಒಬ್ಬ ಹೆಂಡತಿ ಗರ್ಭವತಿಯಾಗಿರುವ ವಿಚಾರವನ್ನು ತಿಳಿದು, ತಂದೆಯ ಸೊತ್ತು ಮಕ್ಕಳಿಗೇ ಸೇರತಕ್ಕುದು; ಮುಂದೆ ಹುಟ್ಟುವ ಧನಮಿತ್ರಪುತ್ರನಿಗೆ ಅದು ಸೇರಬೇಕು ಎಂದು ತೀರ್ಪಿತ್ತು ಕಳುಹಿಸಿದನು. ಪಾಪಿಗಳನ್ನುಳಿದು ಯಾರು ಯಾರು ಪ್ರಿಯಬಂಧುಗಳಿಂದ ಅಗಲುವರೋ ಅವರೆಲ್ಲರಿಗೂ ದುಷ್ಯಂತನೇ ಬಂಧುವಾಗಿ ನಡೆಯುವನೆಂದು ಪಟ್ಟಣದಲ್ಲೆಲ್ಲ ಸಾರುವಂತೆ ಆಜ್ಞೆಮಾಡಿದನು.

ಸಂತತಿ ವಿಚ್ಛೇದದಿಂದ ಆಸರೆಯಿಲ್ಲದಾಗುವ ಕುಲಗಳಿಗೆ ಮೂಲ ಪುರುಷನು ಮಡಿದರೆ, ಅವನ ಸಂಪತ್ತೆಲ್ಲವೂ ಆ ಗತಿಗೀಳಿಯುವುದಲ್ಲವೆ? ನಾನಾದಮೇಲೆ ಪುರುವಂಶದ ಸಂಪತ್ತಿಗೂ ಇದೇ ಗತಿಯೇ ಎಂದು ಅವನ ಮನಸ್ಸು ದುಃಖದ ಕಡಲಿನಲ್ಲಿ ಮುಳುಗಿತು. ಗರ್ಭವತಿಯಾಗಿದ್ದ ಶಕುಂತಲೆಯನ್ನು ಮತ್ತೆ ಮತ್ತೆ ನೆನೆದು ತಪಿಸಿಹೋದನು.

ಆಗ ಅವನನ್ನು ಸಮಾಧಾನಪಡಿಸಲು ಮಾಢವ್ಯನೂ ಬಳಿಯಲ್ಲಿರಲಿಲ್ಲ. ಚಿತ್ರವನ್ನು ಹಸನುಮಾಡಲು ವರ್ಣಕುಂಚಗಳನ್ನು ತರಬೇಕೆಂದು ಅರಸನು ಆಜ್ಞೆಮಾಡಲು ಚತುರಿಕೆಯು ಅವುಗಳನ್ನು ತರುತ್ತಿದ್ದಳು. ದುಷ್ಯಂತನ ಮಡದಿಯಾದ ವಸುಮತಿಯು ಆ ವೃತ್ತಾಂತವನ್ನು ತಿಳಿದು ಅವುಗಳನ್ನು ತಾನೇ ತೆಗೆದುಕೊಂಡು ಅರಸನ ಬಳಿಗೆ ಬರುವುದರಲ್ಲಿದ್ದಳು. ಅರಸನು ಶಕುಂತಲೆಯ ಚಿತ್ರದರ್ಶನದಿಂದ ವಸುಮತಿಯು ನೊಂದುಕೊಂಡಾಳೆಂದು ಭಾವಿಸಿ ಅದನ್ನು ಮಾಢವ್ಯನ ಕೈಯಲ್ಲಿ ಕೊಟ್ಟು ಕಳುಹಿಸಿ

ಬಿಟ್ಟಿದ್ದನು. ಅವನು ಮೇಘ ಪ್ರತಿಚ್ಛಂದವೆಂಬ ವಿಹಾರ ಭವನದಲ್ಲಿ ದೊರೆಗಾಗಿ ಕಾದಿದ್ದನು.

ಆಗ, ಇಂದ್ರ ಸಾರಥಿಯಾದ ಮಾತಲಿಯು ತನ್ನ ಪ್ರಭುವಿನ ಅಪ್ಪಣೆಯಂತೆ ದುಷ್ಯಂತನನ್ನು ಸ್ವರ್ಗಲೋಕಕ್ಕೆ ಕರೆದೊಯ್ಯಲು ಅಲ್ಲಿಗೆ ಬಂದನು. ಕಾಲನೇಮಿಯೇ ಮೊದಲಾದ ದಾನವರೆಲ್ಲರೂ ಅಮರಾವತಿಯನ್ನು ಮುತ್ತಿ ದೇವೇಂದ್ರನಿಗೆ ಅಜೇಯರಾಗಿ ಕಾಳಗಮಾಡುತ್ತಿರಲು ಅವರನ್ನು ಜಯಿಸಲು ದುಷ್ಯಂತನ ಸಹಾಯವು ಬೇಕಾಯಿತು. ಮಾತಲಿಯು ಕೇವಲ ದೀನಾವಸ್ಥೆಯಲ್ಲಿದ್ದ ದುಷ್ಯಂತನನ್ನು ಹುರಿಗೊಳಿಸಿ, ಆಮೇಲೆ ಇಂದ್ರ ಸಂದೇಶವನ್ನು ಅವನಿಗೆ ತಿಳಿಸಬಯಸಿ, ಪ್ರಾಸಾದದಲ್ಲಿದ್ದ ಮಾಢವ್ಯನ ಕುತ್ತಿಗೆಯನ್ನು ಅವುಕಿ ನೋಯಿಸಿದನು. ಮಾಢವ್ಯನು ರಕ್ಷಣೆಗಾಗಿ ತನ್ನ ಮಿತ್ರನನ್ನು ಕೂಗಿಕೊಳ್ಳಲು, ದುಷ್ಯಂತನು ಮೂರ್ಛೆ ತಿಳಿದೆದ್ದು, ಬಿಲ್ಲಿನಲ್ಲಿ ಬಾಣವನ್ನು ಹೂಡಿ ಪ್ರಯೋಗಿಸುವುದರಲ್ಲಿರಲು, ಮಾತಲಿಯು ಅವನಿಗೆ ಕಾಣಿಸಿಕೊಂಡನು; ಇಂದ್ರಸಂದೇಶವನ್ನು ಅರಸನಿಗೆ ಅರಿಕೆಮಾಡಿ, ಅಮರಾವತಿಗೆ ದಯಮಾಡಿಸಬೇಕೆಂದು ಪ್ರಾರ್ಥಿಸಿದನು. ಆ ಪ್ರಾರ್ಥನೆಯಂತೆ, ದುಷ್ಯಂತನು ತಾನು ಹಿಂತಿರುಗಿ ಬರುವವರೆಗೂ ರಾಜ್ಯಭಾರವನ್ನು ನಿರ್ವಹಿಸುವುದೆಂದು ಮಂತ್ರಿಯಾದ ಪಿಶುನನಿಗೆ ಹೇಳಿ ಕಳುಹಿಸಿ, ರಥದಲ್ಲಿ ಕುಳಿತು ಮಾತಲಿಯೊಡನೆ ಅಮರಾವತಿಗೆ ಹೊರಟನು.

ಅರಸನ ಧನುಷ್ಟಂಕಾರ ಮಾತ್ರದಿಂದಲೇ ಅಮರಾವತಿಯನ್ನು ಮುತ್ತಿದ್ದ ಕಾಲನೇಮಿಯೇ ಮೊದಲಾದ ರಾಕ್ಷಸರೆಲ್ಲರೂ ಬಹು ಭೀತರಾಗಿ ಪಲಾಯನವಾದರು. ವಿಜಯವು ದೇವತೆಗಳ ಕೈಸೇರಿತು. ಮಹೇಂದ್ರನಿಗೆ ಪರಮಾನಂದವಾಯಿತು. ತನ್ನ ವಿಜಯಕ್ಕೆ ಕಾರಣನಾದ ದುಷ್ಯಂತನನ್ನು ಸನ್ಮಾನಿಸಿದನು; ತನ್ನ ಮಗನಾದ ಜಯಂತನು ಅಸೂಯೆಪಡುತ್ತಿದ್ದರೂ ದುಷ್ಯಂತನನ್ನು ತನ್ನ ಸಿಂಹಾಸನದಲ್ಲಿ ತನ್ನೊಡನೆ ಸಮಸಮವಾಗಿ ಕುಳ್ಳಿರಿಸಿಕೊಂಡು, ಅವನ ಕೊರಳನ್ನು ಮಂದಾರಪುಷ್ಪಮಾಲಿಕೆಯಿಂದ ಅಲಂಕರಿಸಿದನು. ಸ್ವರ್ಗಾಂಗನೆಯರೆಲ್ಲರೂ ಕಲ್ಪವೃಕ್ಷದ ಎಲೆಗಳಲ್ಲಿ ಆತನ ವಿಜಯ ಗೀತಗಳನ್ನು ಬರೆದರು. ಮಧುರವಾಗಿ ಆ ಗೀತಗಳನ್ನು ಹಾಡಿ, ನರ್ತಿಸಿದರು.

ಇದಾದ ಬಳಿಕ ದುಷ್ಯಂತನು ಮಹೇಂದ್ರನ ಅಪ್ಪಣೆಯನ್ನು ಪಡೆದು ಅವನ ರಥದಲ್ಲಿಯೇ ಕುಳಿತು ಮಾತಲಿಯ ಸಾರಥ್ಯದಲ್ಲಿ ಭೂಲೋಕಕ್ಕೆ ಹೊರಟನು. ಮಾರ್ಗದಲ್ಲಿ ಮಾತಲಿಯು ಅಲ್ಲಲ್ಲಿನ ಊರ್ಧ್ವ ಲೋಕಗಳ ವಿಶೇಷವನ್ನು ವರ್ಣಿಸುತ್ತ, ಪೂರ್ವದಿಂದ ಪಶ್ಚಿಮದ ವರೆಗೂ ಹರಡಿ, ಸ್ವರ್ಣಲಿಪ್ತವಾದಂತೆ ಫಳ ಫಳನೆ ಹೊಳೆಯುತ್ತಿದ್ದ ಹೇಮಕೂಟ ಪರ್ವತವನ್ನು ದೊರೆಗೆ ತೋರಿಸಿ, ಮಾರೀಚ ಮಹರ್ಷಿಗಳು ಅದಿತಿದೇವಿಯೊಡನೆ ಅಲ್ಲಿ ತಪಸ್ಸುಮಾಡುತ್ತಿರುವರೆಂದೂ ಅದು ತಪಸ್ವಿಗಳಿಗೆ ಸಿದ್ಧಿಕ್ಷೇತ್ರವೆಂದೂ ಹೇಳಿದನು. ಅರಸನು ಮಹರ್ಷಿಗಳ ದರ್ಶನಭಾಗ್ಯವನ್ನು ಪಡೆಯಬೇಕೆಂದು ಬಯಸಲು, ಮಾತಲಿಯು ರಥವನ್ನು ಆಕಡೆ ತರುಬಿದನು. ಇಬ್ಬರೂ ರಥದಿಂದಿಳಿದಮೇಲೆ, ಮಾತಲಿಯು ದೊರೆಯನ್ನು ಅಶೋಕ ವೃಕ್ಷದ ನೆಳಲಲ್ಲಿ ಕುಳ್ಳಿರಿಸಿ, ಮಾರೀಚರಿಗೆ ಸುದ್ದಿಯನ್ನು ತಿಳಿಸಲು ಹೋದನು.

ದುಷ್ಯಂತನು ಆ ಮರದಡಿಯಲ್ಲಿ ಕುಳಿತಿದ್ದಂತೆಯೆ, ಅವನಿಗೆ ಬಲ ಭುಜವದುರಿ ಶುಭ ಶಕುನವಾಯಿತು. "ಪ್ರೇಯಸಿಯನ್ನು ಕಾಣುವ ಆಸೆ ನನಗಿಲ್ಲವಾಯಿತು. ಅವಳು ಹಿಂತಿರುಗುವಂತಿಲ್ಲ. ಎಲೆ ಭುಜವೆ, ನಿಷ್ಪ್ರಯೋಜನವಾಗಿ ಅದುರುವೆಯೇತಕ್ಕೆ?" ಎಂದು ಅವನು ಬಿಸುಸುಯ್ದನು. ಆ ಹೊತ್ತಿಗೆ ಸುಂದರಾಕೃತಿಯ ಬಾಲಕನೊಬ್ಬನು ತಾಯಮೊಲೆ ಸವಿಯುತ್ತಿದ್ದ ಸಿಂಹದ ಮರಿಯೊಂದನ್ನು ಹಿಡಿದೆಳೆದು ಅದನ್ನು ಆಡಿಸುತ್ತ ಆ ಕಡೆಗೆ ಬಂದನು. ಅವನನ್ನು ತಡೆಯಲು ತಾಪಸಿಯರಿಬ್ಬರು, "ವತ್ಸ! ತುಂಟತನ ಮಾಡಬಾರದು" ಎಂದು ಹೇಳುತ್ತ ಅವನನ್ನು ಹಿಂಬಾಲಿಸಿ ಬಂದರು. ಅದನ್ನು ಕೇಳಿ, ಅವಿನಯಕ್ಕೆಡೆಯಿಲ್ಲದ ಈ ತಪೋವನದಲ್ಲಿ ಬೇಡವೆಂದು ನಿಷೇಧಿಸುತ್ತಿರುವುದಾರನ್ನು? ಎಂದುಕೊಂಡು ಸಿಂಹದ ಮರಿಯನ್ನು ಎಳೆದು ತರುತ್ತಿದ್ದ ಬಾಲಕನನ್ನು ನೋಡಿ, ಅವನ ಆದಟಿಗೆ ದೊರೆಯು ಅಚ್ಚರಿಗೊಳ್ಳುತ್ತಿದ್ದನು. "ಮರಿಯೆ, ಬಾಯಿ ತೆರೆ. ಹಲ್ಲುಗಳನ್ನು ಎಣಿಸುವೆನು" ಎಂದು ನುಡಿಯುತ್ತಿದ್ದ ಅವನ ಮಾತುಗಳನ್ನು ಕೇಳಿಯಂತೂ ದುಷ್ಯಂತನಿಗೆ ಇನ್ನೂ ಆಶ್ಚರ್ಯವಾಯಿತು. "ತುಂಟ! ಎಳ ಮರಿಗಳನ್ನು ಮೊದಲಾಗಿ

ಪ್ರಾಣಿಗಳನ್ನು ಪೀಡಿಸುವೆಯಾ? ಬೇಡ ಬೇಡ'' ಎಂದು ತಾಪಸಿಯರು ತಡೆಯುತ್ತಿದ್ದರೂ ಆ ಬಾಲಕನು ಸಿಂಹದ ಮರಿಯನ್ನು ಬಿಡದೆ ಮತ್ತಷ್ಟು ಉತ್ಸಾಹದಿಂದ ಮೆರೆಯುತ್ತಿದ್ದನು. ಬಾಲಕನನ್ನು ನೋಡುತ್ತ ನೋಡುತ್ತ ದುಷ್ಯಂತನಿಗೆ ಅವನ ವಿಷಯದಲ್ಲಿ ನಿರ್ವ್ಯಾಜವಾದ ಪುತ್ರಸ್ನೇಹವು ಮೂಡಿದುದನ್ನು ಕಂಡು, ''ನನಗೆ ಮಕ್ಕಳಿಲ್ಲದುದರಿಂದಲೇ ಹೀಗಾಗಿರಬಹುದು'' ಎಂದು ತನ್ನನ್ನು ತಾನು ಸಂತಯಿಸಿಕೊಂಡನು. ಮುಂದೆ ತಾಪಸಿಯರಿಗೂ ಆ ಬಾಲಕನಿಗೂ ನಡೆದ ಸಂಭಾಷಣೆಯನ್ನು ಕೇಳಿಯಂತೂ ದುಷ್ಯಂತನಿಗೆ ಅವನಲ್ಲಿ ಉಂಟಾಗಿದ್ದ ಭಾವವು ಬಲಿಯಲು ಕಾರಣವಾಯಿತು.

ತಾಪಸಿ.—ಸರ್ವದಮನ, ಈ ಮರಿಯನ್ನು ನೀನು ಬಿಡದಿದ್ದರೆ ಇದರ ತಾಯಿ ನಿನ್ನ ಮೇಲೆ ಹಾರಿಬಿಡುತ್ತದೆ.

ಬಾಲಕ.—(ನಸುನಕ್ಕು) ಅಬ್ಬ! ನನಗೆ ಬಹಳ ಹೆದರಿಕೆಯಾಗುತ್ತದೆ!

ತಾಪಸಿ.—ಮಗು, ಈ ಮರಿಯನ್ನು ಬಿಟ್ಟುಬಿಡು, ನಿನಗೆ ಬೇರೆ ಆಟದ ಸಾಮಾನನ್ನು ಕೊಡುತ್ತೇವೆ.

ಬಾಲಕ.—ಎಲ್ಲಿ ಕೊಡು ಮತ್ತೆ. (ಎಂದು ಕೈಚಾಚುವನು.)

ಆಗ ದುಷ್ಯಂತನು ಆ ಬಾಲಕನ ಹಸ್ತದಲ್ಲಿರುವ ಚಕ್ರವರ್ತಿ ಲಕ್ಷಣಗಳನ್ನು ನೋಡಿ ವಿಸ್ಮಿತನಾದನು. ತಾಪಸಿಯು ಇನ್ನೊಬ್ಬಳನ್ನು ಕುರಿತು, ''ಸುವ್ರತೆ, ಮಂಕಣ ಮುನಿಯ ಮಗನ ಬಳಿ ಮಣ್ಣಿನ ನವಿಲಿದೆ. ಬೇಗ ಹೋಗಿ ಅದನ್ನು ತೆಗೆದುಕೊಂಡು ಬಾ'' ಎಂದು ಅವಳನ್ನು ಕಳುಹಿಸಿದಳು. ಬಾಲಕನು ''ನಾನು ಈ ಮರಿಯೊಡನೆಯೇ ಆಟವಾಡುತ್ತೇನೆ'' ಎಂದು ಕಿಲಕಿಲನೆ ನಗುತ್ತ ಹೇಳಿದುದನ್ನು ಕೇಳಿದ ದುಷ್ಯಂತನು ಅವನ ಗಾಂಭೀರ್ಯವನ್ನೂ ಮುದ್ದು ಮಾತುಗಳನ್ನೂ ಮನಸ್ಸಿಗೆ ತಂದುಕೊಂಡು, ''ಮಕ್ಕಳ ಮೈಧೂಳಿನಿಂದ ಮಲಿನವಾದ ತೊಡೆಗಳುಳ್ಳ ತಂದೆಯರು ಅದೇನು ಧನ್ಯರೋ'' ಎಂದುಕೊಂಡನು.

ಆ ಸಮಯದಲ್ಲಿ ಬಾಲಕನನ್ನು ಹೇಗಾದರೂ ಮಾಡಿ ತಡೆದು, ಆ ಸಿಂಹದ ಮರಿಯನ್ನು ಬಿಡಿಸಬೇಕೆಂದು ತಾಪಸಿಯರು ಸಮೀಪದಲ್ಲಿಯೇ ಆಶ್ರಮದವರಾರಾದರೂ ಇರಬಹುದೆಂದು ನೋಡಿ ದುಷ್ಯಂತನಿರುವುದನ್ನು

ಕಂಡು, "ಭದ್ರಮುಖ, ಈ ಬಾಲಕನು ಈ ಮರಿಯನ್ನು ಬಹಳವಾಗಿ ಪೀಡಿಸುತ್ತಿರುವನು. ಸ್ವಲ್ಪ ಬಿಡಿಸು" ಎಂದು ಪ್ರಾರ್ಥಿಸಿದರು. ದುಷ್ಯಂತನು ಅವನ ಬಳಿಗೆ ಹೋಗಿ, "ಮಗು, ಋಷಿಕುಮಾರನಾಗಿ ಆಶ್ರಮವಿರುದ್ಧಗಳಾದ ಕಾರ್ಯಗಳನ್ನು ಮಾಡಬಹುದೆ? ಬೇಡ" ಎಂದನು. ತಾಪಸಿಯು ಅವನ ಮಾತನ್ನು ಕೇಳಿ, "ಇವನು ಋಷಿ ಕುಮಾರನಲ್ಲ" ಎಂದಳು.

ಬಾಲಕನ ಆಕೃತಿ, ಅವನು ಮಾಡುತ್ತಿದ್ದ ಧೀರೋದಾತ್ತ ಕಾರ್ಯ–ಇವೇ ಅವನು ಋಷಿಕುಮಾರನಲ್ಲವೆಂಬುದನ್ನು ಸೂಚಿಸಿದ್ದುವು. ದುಷ್ಯಂತನಿಗೂ ಇದು ತಿಳಿದಿದ್ದಿತು. ಆದರೂ ವಿಷಯವನ್ನು ತಿಳಿಯಲು ಅವನು ಹಾಗೆಂದಿದ್ದನು. ಅವನು ಬಾಲಕನನ್ನು ಸ್ಪರ್ಶಿಸಿ, ಕುಲಾಂಕುರ ಪ್ರಾಯನಾದ ಕುಮಾರನನ್ನು ಸ್ಪರ್ಶಿಸಿದಷ್ಟು ಆನಂದವು ತನ್ನಲ್ಲಿ ಉಂಟಾದುದನ್ನು ಕಂಡು ಆಶ್ಚರ್ಯಭರಿತನಾದನು. ಸುತಸ್ಪರ್ಶದಿಂದ ತಂದೆಯರಿಗೆ ಆನಂದವಾಗುವುದು ಅತಿಶಯವೆ?

ತಾಪಸಿಯರು ಆ ಬಾಲಕನ ಮತ್ತು ದೊರೆಯ ಆಕೃತಿಗಳಲ್ಲಿ ಹೋಲಿಕೆಯಿರುವುದನ್ನು ಕಂಡು ತಮ್ಮಲ್ಲಿಯೇ ಆಶ್ಚರ್ಯಪಡುತ್ತಿದ್ದರು. ಬಾಲಕನು ಕ್ಷತ್ರಿಯ ಕುಮಾರನೆಂದು ಸ್ಪಷ್ಟವಾದಮೇಲೆ ದುಷ್ಯಂತನು ಅವನು ಯಾರ ಮಗನೆಂದು ತಿಳಿದುಕೊಳ್ಳಲು ತಾಪಸಿಯನ್ನು ಪ್ರಶ್ನಿಸಿದನು.

ತಾಪಸಿ.—ಆರ್ಯ, ಈ ಬಾಲಕನು ಪುರುವಂಶದವನು.

ಅರಸ.—(ಸ್ವಗತ) ನಮ್ಮಿಬ್ಬರ ವಂಶವೂ ಒಂದೇ ಆಗಿದೆಯೆ! ಆದುದರಿಂದಲೇ ಈ ಪೂಜ್ಯೆಯು ಇವನು ನನ್ನನ್ನು ಹೋಲುತ್ತಿರುವನೆಂದು ತಿಳಿದಿರುವಳು. ಇದು ಅಸಂಭವವೂ ಅಲ್ಲ. ಪುರುವಂಶದವರು ವಾನಪ್ರಸ್ಥಾಶ್ರಮಿಗಳಾಗಿ ತಪೋವನಗಳಲ್ಲಿರುವುದುಂಟು. (ಪ್ರಕಾಶ) ಇದು ಮನುಷ್ಯರಿರುವ ದೇಶವಲ್ಲವಷ್ಟೆ.

ತಾಪಸಿ.—ಅದು ನಿಜ. ಅಪ್ಸರಸಂಬಂಧದಿಂದ ಈ ಬಾಲಕನ ತಾಯಿಯು ಇವನನ್ನು ಇಲ್ಲಿ ಪ್ರಸವಿಸಿದಳು.

ಅರಸ.—(ಸ್ವಗತ) ಈ ಮಾತು ಮತ್ತೊಮ್ಮೆ ಆಸೆಯನ್ನು

ಹುಟ್ಟಿಸುತ್ತಿರುವುದು. (ಪ್ರಕಾಶ) ಇವನ ತಾಯಿಯು ಯಾವ ರಾಜರ್ಷಿಯ ಪತ್ನಿ?

ತಾಪಸಿ.—ಧರ್ಮಪತ್ನಿಯ ಹೆಸರನ್ನು, ತೊರೆದವರ ಹೆಸರನ್ನು ಯಾರುತಾನೆ ಹೇಳಿಯಾರು?

ಅರಸ.—(ಸ್ವಗತ) ಈ ಮಾತು ನನ್ನನ್ನೇ ಕುರಿತಂತೆ ಇದೆ. ಈ ಬಾಲಕನ ತಾಯ ಹೆಸರನ್ನು ಕೇಳಲೆ? ಅಥವಾ ಪರಪತ್ನಿಯ ವಿಚಾರ ವನ್ನು ಕೇಳುವುದು ನ್ಯಾಯವಲ್ಲ.

ಅರಸನು ಹೀಗೆಂದುಕೊಳ್ಳುತ್ತಿರುವಲ್ಲಿ ಸುವ್ರತೆಯೆಂಬ ತಾಪಸಿ, ಬಣ್ಣದ ನವಿಲನ್ನು ತಂದು ಬಾಲಕನಿಗೆ ತೋರಿಸಿ, "ಸರ್ವದಮನ, ಶಕುಂತಲಾವಣ್ಯವನ್ನು ನೋಡು" ಎಂದಳು. ಬಾಲಕನು ನಾಮ ಸಾದೃಶ್ಯವಿದ್ದುದರಿಂದ ತನ್ನ ತಾಯಿ ಎಂದೇ ಭ್ರಮಿಸಿ, "ಅಮ್ಮ ಎಲ್ಲಿ" ಎಂದನು. ಅರಸನು ಇದನ್ನು ಕೇಳಿ ದಿಗ್ಭ್ರಾಂತನಾದನು. ಆದರೂ ಆ ಹೆಸರಿನವರು ಎಷ್ಟೋಮಂದಿ ಇರಬಹುದೆಂದು ಸುಮ್ಮನಾದನು.

ಬಾಲಕನು ಆ ನವಿಲನ್ನು ಅಕ್ಕರೆಯಿಂದ ತೆಗೆದುಕೊಂಡು ಆಟವಾಡುತ್ತಿರಲು, ತಾಪಸಿಯರು ಅವನ ರಕ್ಷಾಮಣಿಯು ಎಲ್ಲಿಯೋ ಬಿದ್ದುಹೋಗಿರುವುದನ್ನು ಆಗ ನೋಡಿಕೊಂಡರು. ಅದು ಅಲ್ಲಿಯೇ ಬಿದ್ದಿದ್ದುದನ್ನು ನೋಡಿ ದುಷ್ಯಂತನು ಅದನ್ನು ಕೈಗೆ ತೆಗೆದುಕೊಳ್ಳಲು ಹೋದನು. ತಾಪಸಿಯರು, "ಮುಟ್ಟಬೇಡಿ, ಮುಟ್ಟಬೇಡಿ" ಎಂದು ಹೇಳುತ್ತಿದ್ದರೂ ಅರಸನು ಅದನ್ನು ತೆಗೆದುಕೊಂಡು, "ಏತಕ್ಕಾಗಿ ನನ್ನನ್ನು ತಡೆದಿರಿ" ಎಂದು ಕೇಳಿದನು. ತಾಪಸಿಯು "ಮಹಾರಾಜ, ಇದು ಅಪರಾಜಿತೆ ಎಂಬ ಮೂಲಿಕೆ. ಪೂಜ್ಯರಾದ ಮಾರೀಚ ಮಹರ್ಷಿ ಗಳು ಈ ಬಾಲಕನ ಜಾತಕರ್ಮ ಸಮಯದಲ್ಲಿ ಕಟ್ಟಿದುದು. ಇದು ಕೆಳಗೆಬಿದ್ದಾಗ ತಾಯಿತಂದೆಯರನ್ನುಳಿದು ಮತ್ತಾರೂ ಇದನ್ನು ತೊಡದಿರಲಿ ಎಂದವರು ಹೇಳಿದ್ದರು" ಎಂದಳು. "ಮತ್ತಾರಾದರೂ ಇದನ್ನು ಮುಟ್ಟಿದರೆ ಏನಾಗುವುದು?" ಎಂದು ಅರಸನು ಕೇಳಲು, "ಸರ್ಪವಾಗಿ ಕಚ್ಚುವುದು" ಎಂದು ತಾಪಸಿಯು ಉತ್ತರಕೊಟ್ಟಳು.

ದುಷ್ಯಂತನಿಗೆ ಪರಮಾನಂದವಾಯಿತು. ಬಾಲಕನು ತನ್ನ ಮಗನೇ

ಎಂಬ ಸಂಗತಿ ದೃಢವಾಯಿತು. ತನ್ನ ಮನೋರಥವು ಪೂರ್ಣವಾದುದಕ್ಕಾಗಿ ತನ್ನನ್ನು ತಾನೇ ಅಭಿನಂದಿಸಿಕೊಂಡು, ಬಾಲಕನನ್ನಪ್ಪಿ ಮುದ್ದಿಸಿದನು. ತಾಪಸಿಯರಿಬ್ಬರಿಗೂ ಏಕಕಾಲದಲ್ಲಿಯೇ ಸಂತೋಷಾಶ್ಚರ್ಯಗಳು ಸಮನಿಸಿದುವು. ಪ್ರಿಯಾವಿರಹದಿಂದ ಚಿರತಪಸ್ವಿನಿಯಾಗಿದ್ದ ಶಕುಂತಲೆಗೆ ತಿಳಿಸಲು ತ್ವರೆಗೊಂಡು ಅವರು ತೆರಳಿದರು.

ಇತ್ತ ಬಾಲಕನು, "ನನ್ನನ್ನು ಬಿಡು, ಅಮ್ಮನ ಬಳಿಗೆ ಹೋಗುವೆನು" ಎಂದನು. ದುಷ್ಯಂತನು "ಪುತ್ರ, ನಾವಿಬ್ಬರೂ ನಿನ್ನ ತಾಯಬಳಿಗೆ ಹೋಗೋಣ" ಎಂದು ಹೇಳಿದುದನ್ನು ಕೇಳಿ, ಆ ಬಾಲಕನು, "ನನ್ನ ತಂದೆ ದುಷ್ಯಂತ ಮಹಾರಾಜನು. ನೀನಲ್ಲ" ಎನ್ನಲು ಅರಸನಿಗೆ ಮತ್ತಷ್ಟು ನಂಬಿಕೆಯಾಯಿತು.

ಆ ಹೊತ್ತಿಗೆ ಶಕುಂತಲೆ ತಾಪಸಿಯರಿಂದ ನಡೆದ ವೃತ್ತಾಂತವನ್ನು ತಿಳಿದು ತನ್ನ ಭಾಗಧೇಯವು ಪೂರ್ಣಗೊಂಡಿತೆಂದು ಭಾವಿಸಿ ಅಲ್ಲಿಗೆ ಬಂದಳು. ವಿರಹ ದುಃಖದಿಂದ ಕಂದಿಹೋಗಿದ್ದರೂ, ಯಾವ ಅಲಂಕಾರಗಳೂ ಇಲ್ಲದಿದ್ದರೂ, ಧೂಳಡಸಿದ ಬಟ್ಟೆಯುಟ್ಟು ಏಕವೇಣೀ ಧರೆಯಾಗಿದ್ದರೂ ಅವಳ ಸೌಂದರ್ಯವು ಮಾಸಿರಲಿಲ್ಲ. ಅವಳು ದುಷ್ಯಂತನನ್ನು ನೋಡಿದೊಡನೆ ತನ್ನಂತೆಯೇ ಚಿರತಪಸ್ವಿಯಾಗಿ ಶೋಷಿಸಿಹೋಗಿದ್ದ ಅವನನ್ನು ಮೊದಮೊದಲು ಗುರುತಿಸದೆ ಬೇರಾವನೋ ಆಗಿರಬಹುದೆಂದು ಶಂಕಿಸಿದಳು. ಪರಕೀಯನಾದ ಅವನು ತನ್ನ ಮಗನನ್ನೂ ಪವಿತ್ರವಾದ ಅವನ ರಕ್ಷಾಮಣಿಯನ್ನೂ ಮುಟ್ಟಿ ಅಪವಿತ್ರಗೊಳಿಸಿದನೆಂದು ಎಣಿಸಿದಳು. ಅಷ್ಟರಲ್ಲಿ ಸರ್ವದಮನನು, "ಅಮ್ಮಾ, ಇವನಾರೋ ನನ್ನನ್ನು ಪುತ್ರ ಪುತ್ರ ಎಂದು ಕರೆಯುತ್ತಿರುವನು" ಎಂದನು. ಆಗ ದುಷ್ಯಂತನು ಆಕೆಯಲ್ಲಿ ತಾನು ಮಾಡಿದ್ದ ಮಹಾಪರಾಧಕ್ಕಾಗಿ ಮನಮರುಗಿ, ನಮ್ರನಮ್ರನಾಗಿ, ಅವಳ ಪಾದಗಳಿಗೆ ಮಣಿದು, ಮನ್ನಿಸಬೇಕೆಂದು ಪ್ರಾರ್ಥಿಸಿದನು.

ಶಕುಂತಲೆಗೆ ಆಗ ತನ್ನ ಪತಿಯ ಗುರುತಾಯಿತು. ತನಗಾಗಿ ಪರಿತಪಿಸಿ ಕಂದಿಹೋಗಿದ್ದ ಆತನ ಆಕೃತಿಯನ್ನು ನೋಡಿ ಅವಳ ಮನಸ್ಸು ಕರಗಿತು. ಆನಂದ ಬಾಷ್ಪಗಳು ಉಕ್ಕಿಬರುತ್ತಿರಲು,

"ಆರ್ಯಪುತ್ರ ಅಪರಾಧವೆಲ್ಲವೂ ನನ್ನ ದುರದೃಷ್ಟದ್ದು. ಹಿಂದಿನ ಜನ್ಮದಲ್ಲಿ ನಾನು ಮಾಡಿದ ಪಾಪವು ನನ್ನನ್ನು ಈ ಶಿಕ್ಷೆಗೆ ಗುರಿಮಾಡಿತು. ಹಾಗಿಲ್ಲದಿದ್ದರೆ ನಿನ್ನಂತಹ ಉದಾರಿಯು ಆ ವಿಧವಾದ ಕಾಠಿನ್ಯವನ್ನು ತೋರಿಸಲಾಗುತ್ತಿದ್ದಿತೆ" ಎಂದಳು. ದುಷ್ಯಂತನು ಆ ಮಾತನ್ನು ಕೇಳಿ ಯಾವುದೋ ಒಂದು ಭ್ರಾಂತಿಯು ತನ್ನನ್ನು ಆವರಿಸಿ ಬುದ್ಧಿಯು ಮಾರಿಹೋಗಿದ್ದುದನ್ನೂ, ಆಮೇಲೆ ನಡೆದ ವೃತ್ತಾಂತವನ್ನೂ ಅವಳಿಗೆ ತಿಳಿಸಿ, ಎಲ್ಲಕ್ಕೂ ಕಾರಣವಾದ ತನ್ನ ಮುದ್ರೆಯುಂಗುರವನ್ನು ಅವಳಿಗೆ ಕೊಡಹೋದನು. ಒಮ್ಮೆ ಒಳ್ಳೆಯ ಸಮಯದಲ್ಲಿ ಮೋಸಮಾಡಿ ಇಷ್ಟು ದುಃಖಗಳಿಗೆ ಕಾರಣವಾದ ಆ ಉಂಗುರವನ್ನು ಆಕೆಯು ಸ್ವೀಕರಿಸಲಿಲ್ಲ. ಆದರೆ ಪತಿ ಸಮಾಗಮದಿಂದ ಅವಳಿಗೆ ಆನಂದವಾಯಿತು.

ಅಂತು ಬಹುಕಾಲ ವಿರಹ ದುಃಖವನ್ನನುಭವಿಸಿದ್ದ ಆ ಸತಿಪತಿಗಳು ಒಟ್ಟಿಗೆ ಸೇರಿದರು. ಆ ಹೊತ್ತಿಗೆ ಮಾತಲಿಯು ಅಲ್ಲಿಗೆ ಬಂದು ಸತಿಪುತ್ರರೊಡಗೂಡಿದ ಅರಸನನ್ನು ಅಭಿನಂದಿಸಿ, ಅವರನ್ನು ಪೂಜ್ಯ ಮಾರೀಚರ ಬಳಿಗೆ ಕರೆದುಕೊಂಡು ಹೋದನು. ಮಹರ್ಷಿಗಳು ದುರ್ವಾಸ ಶಾಪವೃತ್ತಾಂತವನ್ನು ತಿಳಿಸಿ, ಅದರಿಂದ ಅಗಲಿಕೆಯುಂಟಾಯಿತೆಂದು ಹೇಳಿ ಮುಂದೆ ಎಲ್ಲ ಬಗೆಯಲ್ಲೂ ಅವರ ಶ್ರೇಯಸ್ಸನ್ನು ಕೋರಿ ಅವರ ಮಗನಾದ ಸರ್ವದಮನನು ಮುಂದೆ ಅಖಂಡ ಭೂಮಂಡಲವನ್ನು ಭರಣ ಮಾಡುವ ಚಕ್ರವರ್ತಿಯಾಗಿ ಭರತನೆಂದು ಹೆಸರು ಪಡೆಯುವನೆಂಬುದಾಗಿ ಹರಸಿ ಹಸ್ತಿನಾವತಿಗೆ ಬೀಳ್ಕೊಟ್ಟರು. ದುಷ್ಯಂತನು ಪತ್ನೀಪುತ್ರರೊಡನೆ ರಾಜಧಾನಿಯನ್ನು ಸೇರಿ ಬಹುಕಾಲ ಧರ್ಮದಿಂದ ಭೂಮಂಡಲವನ್ನಾಳುತ್ತಿದ್ದನು.

ಪ್ರವರ್ತತಾಂ ಪ್ರಕೃತಿ ಹಿತಾಯ ಪಾರ್ಥಿವಃ
ಸರಸ್ವತೀ ಶ್ರುತಿ ಮಹಿತಾ ಮಹೀಯಸಾಂ ।
ಮಮಾಪಿಚ ಕ್ಷಪಯತು ನೀಲಲೋಹಿತಃ
ಪುನರ್ಭವಂ ಪರಿಗತ ಶಕ್ತಿರಾತ್ಮಭೂಃ ॥

---

# ಮಾಲವಿಕಾಗ್ನಿಮಿತ್ರ

ಹಿಂದೆ ಭರತಖಂಡದಲ್ಲಿ ವಿದಿಶೆ ಎಂಬ ರಾಜ್ಯವೊಂದಿದ್ದಿತು. ಅಗ್ನಿಮಿತ್ರನೆಂಬ ಅರಸನು ಅಲ್ಲಿ ಆಳುತ್ತಿದ್ದನು. ವಿದಿಶೆಗೆ ಬಹು ಸಮೀಪ ದಲ್ಲಿಯೆ ವಿದರ್ಭವೆಂಬ ಇನ್ನೊಂದು ರಾಜ್ಯವಿದ್ದಿತು; ಯಜ್ಞಸೇನನು ಅಲ್ಲಿಯ ದೊರೆ. ಇವನಿಗೆ ಮಾಧವಸೇನನು ದಾಯಾದಿ. ಯಜ್ಞಸೇನ ನಿಗೂ ಮಾಧವಸೇನನಿಗೂ ಆಗಾಗ್ಗೆ ರಾಜ್ಯದ ಸಲುವಾಗಿ ಕಲಹಗಳಾಗು ತ್ತಿದ್ದುವು.

ಮಾಧವಸೇನನಿಗೆ ಮಾಲವಿಕೆ ಎಂಬ ಸಹೋದರಿ ಇದ್ದಳು. ಚೆಲುವೆಯಾದ ಅವಳನ್ನು ಅಗ್ನಿಮಿತ್ರನಿಗೆ ಮದುವೆಮಾಡಿಕೊಟ್ಟು ಅವನ ಸಹಾಯವನ್ನು ಪಡೆದು ಯಜ್ಞಸೇನನ ಕೋಟಲೆಯಿಂದ ಪಾರಾಗ ಬೇಕೆಂದು ಮಾಧವಸೇನನ ಹಂಚಿಕೆ. ಅಗ್ನಿಮಿತ್ರನೂ ಇದಕ್ಕೆ ಸಮ್ಮತಿ ಸಿದ್ದನು. ಆದರೆ ಈ ಮದುವೆಯು ನಡೆದುದಾದರೆ ತನ್ನ ಸ್ಥಾನಕ್ಕೆ ಚ್ಯುತಿಬರುವುದೆಂದೆಣಿಸಿ ಯಜ್ಞಸೇನನು ಮಾಧವಸೇನನನ್ನು ಹಿಡಿದು ಸೆರೆಯಲ್ಲಿಟ್ಟನು.

ಅಗ್ನಿಮಿತ್ರನಿಗೆ ಈ ವಿಷಯವು ತಿಳಿಯಿತು. ಕೂಡಲೆ ಮಾಧವ ಸೇನನನ್ನು ಬಿಡುಗಡೆಮಾಡಬೇಕೆಂದು ಯಜ್ಞಸೇನನಿಗೆ ಪತ್ರಬರೆದನು. ಅವನು ಅದಕ್ಕೊಪ್ಪದೆ ತನ್ನ ಸ್ಯಾಲನಾದ ಮೌರ್ಯಸಚಿವನನ್ನು ಸೆರೆಯಿಂದ ಬಿಡುವುದಾದರೆ ಮಾಧವಸೇನನನ್ನೂ ಬಿಡುವುದಾಗಿ ಉತ್ತರ ಕೊಟ್ಟನು. ಕಡುಗಲಿಯಾದ ಅಗ್ನಿಮಿತ್ರನು ಉದ್ದಂಡತನದ ಈ ಉತ್ತರ ದಿಂದ ಕೆರಳಿ, ಅವನಮೇಲೆ ದಂಡೆತ್ತಿಹೋಗುವುದೆಂದು ತನ್ನ ಸೇನಾಧಿ ಪತಿಯಾದ ವೀರಸೇನನಿಗೆ ಆಜ್ಞಾಪಿಸಿದನು.

ಮಾಧವಸೇನನಿಗೆ ಪ್ರಭುಭಕ್ತಿಸಂಪನ್ನನಾದ ಸುಮತಿಯೆಂಬ ಮಂತ್ರಿಯೊಬ್ಬನಿದ್ದನು. ತನ್ನ ಪ್ರಭುವು ಸೆರೆಗೊಳಗಾದಮೇಲೆ ಸುಮತಿಯು ಅಗ್ನಿಮಿತ್ರನಿಗೆ ತನ್ನ ಪ್ರಭುವು ಮಾಡಿದ್ದ ವಾಗ್ದಾನವನ್ನು

ನೆರವೇರಿಸಬೇಕೆಂದು ಸಂಕಲ್ಪಿಸಿದನು. ಅದರಂತೆ ಅವನು ಮಾಲವಿಕೆಯೊಡನೆಯೂ ತನ್ನ ಸಹೋದರಿಯಾದ ಕೌಶಿಕಿಯೊಡನೆಯೂ ವಿದಿಶೆಗೆ ಪ್ರಯಾಣ ಬೆಳೆಸಿದನು.

ವಿದಿಶೆಗೆ ಹೋಗುವ ದಾರಿಯು ಕೇವಲ ದುರ್ಗಮವಾದ ಕಾಡು ದಾರಿಯಾಗಿದ್ದಿತು. ಆದ್ದರಿಂದ ಸುಮತಿಯು ಅತ್ತಕಡೆಹೋಗುತ್ತಿದ್ದ ವರ್ತಕರ ಗುಂಪಿನ ನೆರವನ್ನು ಪಡೆಯಬೇಕಾಯಿತು. ಸ್ವಲ್ಪದೂರ ಪ್ರಯಾಣವು ಸುಖವಾಗಿ ಬೆಳೆಯಿತು. ಸಂಜೆಯಾದಮೇಲೆ ಎಲ್ಲರೂ ಆ ಕಾಡಿನಲ್ಲಿಯೇ ಒಂದೆಡೆಯಲ್ಲಿ ತಂಗಿದರು. ಎಲ್ಲೆಲ್ಲಿಯೂ ಕತ್ತಲು ತಾನೇತಾನಾಗಿ ಕವಿಯಲು, ದರೋಡೆಕಾರರು ಕೆಲವರು ಅವರಮೇಲೆ ಬಿದ್ದು ಅವರಲ್ಲಿದ್ದುದನ್ನೆಲ್ಲಾ ದೋಚಿದರು. ಅದನ್ನು ನೋಡಿ ಸೈರಿಸಲಾರದೆ, ಸಹಜಪರಾಕ್ರಮಿಯಾದ ಸುಮತಿಯು ಬಿಲ್ಲು ಬಾಣಗಳನ್ನು ಹಿಡಿದು ಆ ಧೂರ್ತರೊಡನೆ ಕೆಲಕಾಲ ಕಾಳಗಮಾಡಿ, ಒಬ್ಬೊಂಟಿಗನಾದುದರಿಂದ ಕಡೆಗೆ ಸೋತು ಮಡಿದನು. ಆ ಕೋಲಾಹಲವನ್ನು ನೋಡುತ್ತಿದ್ದ ಅವನ ಸಹೋದರಿಯಾದ ಕೌಶಿಕಿಯು ಭಯಶೋಕಗಳಿಗೆ ತುತ್ತಾಗಿ ಮೂರ್ಛೆಹೋದಳು. ದರೋಡೆಕಾರರು ಅವಳು ಮಡಿದಿರಬೇಕೆಂದು ಬಗೆದು, ಅವಳನ್ನಲ್ಲಿಯೆ ಬಿಟ್ಟು ಹೊರಟುಹೋದರು.

ಕೌಶಿಕಿಗೆ ಪ್ರಜ್ಞೆಬಂದಮೇಲೆ, ರಾಜಪುತ್ರಿಯಾದ ಮಾಲವಿಕೆಯನ್ನು ಧೂರ್ತರು ಸಾಗಿಸಿಕೊಂಡುಹೋಗಿರುವುದು ತಿಳಿಯಿತು. ದುಃಖಸಂತಪ್ತೆಯಾದರೂ ವಿವೇಕಿನಿಯಾದುದರಿಂದ ಆ ದುಃಖವನ್ನಡಗಿಸಿಕೊಂಡು ಅಣ್ಣನಿಗೆ ಅಂತ್ಯಕ್ರಿಯೆಗಳನ್ನು ಮಾಡಿ ಮುಗಿಸಿದಳು. ಆಗ ಅವಳಿಗೆ ಜೀವನವೇ ಬೇಸರವಾಯಿತು. ಶಾಸ್ತ್ರವ್ಯಾಸಂಗಮಾಡಿ ಕಾರ್ಯಾಕಾರ್ಯಗಳ ಅರಿವು ಅವಳಿಗೆ ಚೆನ್ನಾಗಿದ್ದುದರಿಂದ ಅವಳು ಆತ್ಮಹತ್ಯೆಮಾಡಿಕೊಳ್ಳುವ ಪಾಪಕ್ಕೆ ಹೋಗಲಿಲ್ಲ. ಇದರಮೇಲೆ ಮಾಲವಿಕೆಯನ್ನು ಹುಡುಕುವ ಹಂಬಲೂ ಅವಳಿಗಿದ್ದಿತು. ಅದರಿಂದ ಅವಳು ಕೇವಲ ವಿರಕ್ತೆಯಾಗಿ ಕಾಷಾಯವನ್ನು ಧರಿಸಿ ರಾಜಧಾನಿಯಾದ ವಿದಿಶೆಗೆ ಬಂದು ಸೇರಿದಳು. ತನಗಿರುವ ಪಾಂಡಿತ್ಯದಿಂದಲೂ ಬುದ್ಧಿಕೌಶಲದಿಂದಲೂ ಅವಳು ಅಗ್ನಿಮಿತ್ರನ ಅರಮನೆಯಲ್ಲಿ ಸುಲಭವಾಗಿ ಪ್ರವೇಶವನ್ನು ಪಡೆದು ಬಹು ಬೇಗನೆಯೆ ಪರಿವ್ರಾಜಿಕೆ

ಎಂದು ವಿಖ್ಯಾತಳಾಗಿ, ಮಹಾರಾಜ್ಞಿಯಾದ ಧಾರಿಣೀದೇವಿಗೆ ಅಚ್ಚುಮೆಚ್ಚಿನವಳಾದಳು.

ಇತ್ತ ಮಾಲವಿಕೆಯನ್ನು ಸಾಗಿಸಿಕೊಂಡುಹೋದ ಧೂರ್ತರು ಅವಳು ತೊಟ್ಟಿದ್ದ ಒಡವೆಗಳನ್ನೆಲ್ಲಾ ಸುಲಿದುಕೊಂಡು ವಿದಿಶೆಯ ಎಲ್ಲೋ ಯಲ್ಲಿದ್ದ ನರ್ಮದಾತೀರದಲ್ಲಿ ಅವಳನ್ನು ತೊರೆದು ಹೊರಟುಹೋದರು. ಅಲ್ಲಿ ಅಗ್ನಿಮಿತ್ರನ ಕಡೆಯ ಪಾಳೆಯುವಿದ್ದಿತು. ಹಾಗೂ ಹೀಗೂ ಮಾಲವಿಕೆಯು ಆ ಪಾಳೆಯುವನ್ನು ಸೇರಿದಳು. ಅದರ ಒಡೆಯನಾದ ವೀರಸೇನನು ಆ ಬಾಲೆಯನ್ನು ನೋಡಿ, ಅವಳ ಚೆಲುವು, ನಾಟ್ಯ ಸಂಗೀತಗಳಲ್ಲಿ ಅವಳಿಗಿದ್ದ ಜಾಣ್ಮೆ, ಅವಳ ನಯ ವಿನಯುಗಳನ್ನು ನೋಡಿ, ತನ್ನ ಸೋದರಿಯಾದ ಮಹಾರಾಣಿ ಧಾರಿಣಿಯ ಬಳಿಗೆ ಮೆಚ್ಚಾಗಿ ಕಳುಹಿಸಿದನು. ಧಾರಿಣಿಯು ಅವಳ ರೂಪಗುಣಾದಿಗಳಿಗೂ ಜಾಣ್ಮೆಗೂ ಮೆಚ್ಚಿ, ನಾಟ್ಯದಲ್ಲಿ ಅವಳನ್ನು ಇನ್ನೂ ಕುಶಲೆಯನ್ನಾಗಲು ತಕ್ಕ ವ್ಯವಸ್ಥೆ ಮಾಡಿದಳು. ಮಾಲವಿಕೆಯು ನಾಟ್ಯಾಚಾರ್ಯನಾದ ಗಣದಾಸನ ಉಪದೇಶದಿಂದ ಬಹು ಬೇಗನೆಯೇ ನಾಟ್ಯವಿದ್ಯೆಯಲ್ಲಿ ನೈಪುಣ್ಯವನ್ನು ಪಡೆದಳು.

ಮಾಲವಿಕೆಯು ಅರಮನೆಗೆ ಬಂದು ಸೇರಿದ್ದು ಪರಿವ್ರಾಜಿಕೆಯಾದ ಪಂಡಿತಕೌಶಿಕಿಗೆ ತಿಳಿಯದಿರಲಿಲ್ಲ. ಈ ಸುದ್ದಿಯು ಅವಳಿಗೆ ತಿಳಿದುದರಿಂದಲೇ ಅವಳು ಅರಮನೆಗೆ ಪ್ರವೇಶ ಪಡೆಯಲು ಪ್ರಯತ್ನಿಸಿ ಅದನ್ನು ಸಾಧಿಸಿದುದು. ಮಾಲವಿಕೆಗೂ ಅವಳ ಗುರುತು ಸಿಕ್ಕಿತು. ಆದರೂ ಕೆಲವು ಕಾರಣಗಳಿಂದ ಅವರಿಬ್ಬರೂ ಪರಸ್ಪರ ಪರಿಚಯವಿಲ್ಲದವರಂತೆ ಕಾಲವನ್ನು ನೂಕುತ್ತಿದ್ದರು; ಮಾಲವಿಕೆಯ ಬಾಲ್ಯದಲ್ಲಿ ಸಿದ್ಧಪುರುಷನೊಬ್ಬನು ಅವಳು ಒಂದು ವರ್ಷಕಾಲ ದಾಸ್ಯಭಾವವನ್ನನುಭವಿಸಿ ಆ ಬಳಿಕ ತಕ್ಕ ವರನನ್ನು ಸೇರುವಳೆಂದು ಭವಿಷ್ಯ ನುಡಿದಿದ್ದನು. ಆಗಿನ ಕಾಲದಲ್ಲಿ ಸಿದ್ಧರ ಭವಿಷ್ಯವೆಂದರೆ ಬಹಳ ನಂಬುಗೆ; ಏನಾದರೂ ಅದು ತಪ್ಪುತ್ತಿರಲಿಲ್ಲ. ಈ ಕಾರಣದಿಂದಲೆ ಕೌಶಿಕಿಯೂ ಮಾಲವಿಕೆಯೂ ಅಪರಿಚಿತರಂತೆ ಇದ್ದುದು.

ಕೆಲ ಕಾಲವಾದಮೇಲೆ ಒಂದು ದಿನ, ಧಾರಿಣೀದೇವಿಯು ತಾನೂ ತನ್ನ ಸಖಿಯರೂ ಚಿತ್ರಿತರಾಗಿದ್ದ ಚಿತ್ರಫಲಕವನ್ನು ಪರೀಕ್ಷಿಸುತ್ತ

ಅಂತಃಪುರದಲ್ಲಿ ಕುಳಿತಿದ್ದಳು. ಅಗ್ನಿಮಿತ್ರನು ಅಕಸ್ಮಾತ್ತಾಗಿ ಅಲ್ಲಿಗೆ ಬಂದು ಆ ಚಿತ್ರದಲ್ಲಿ ತನ್ನ ಮಡದಿಯ ಎದುರಾಗಿ ಚಿತ್ರಿತಳಾಗಿದ್ದ ಅಪೂರ್ವ ಸುಂದರಿಯಾದ ಒಬ್ಬ ಬಾಲಿಕೆಯನ್ನು ಕಂಡು ಅವಳ ಸೌಂದರ್ಯಕ್ಕೆ ಮುಗ್ಧನಾಗಿಹೋದನು. ಆಕೃತಿವಿಶೇಷಗಳಲ್ಲಿ ಯಾರಿಗಾದರೂ ಆದರ ಹುಟ್ಟುವುದು ಸಹಜವಲ್ಲವೆ!

ಅಗ್ನಿಮಿತ್ರನಿಗೆ ಆ ಬಾಲೆಯು ಯಾರೆಂದು ತಿಳಿಯಲು ಕುತೂಹಲ ವಾಯಿತು. ಧಾರಿಣಿಯನ್ನು ಕೇಳಿದನು. ಕೇಳಿಸಿಯೂ ಕೇಳಿಸದವಳಂತೆ ಅವಳು ಔದಾಸೀನ್ಯವನ್ನು ವಹಿಸಿದಳು. ಆದರಿಂದ ಅಗ್ನಿಮಿತ್ರನಿಗೆ ಮತ್ತಷ್ಟು ಉತ್ಸುಕತೆಯುಂಟಾಯಿತು. ಮತ್ತೆ ಮತ್ತೆ ಕೇಳತೊಡಗಿದನು. ಆಗ ಅವನ ಮಗಳಾದ ವಸುಲಕ್ಷ್ಮಿಯು ಬಾಲ್ಯಸಹಜವಾದ ಮುಗ್ಧತೆ ಯಿಂದ, "ಅಯ್ಯಾ, ಇವಳು ಮಾಲವಿಕೆ" ಎಂದುಬಿಟ್ಟಳು.

ಹೆಸರನ್ನು ಕೇಳಿದ ಮಾತ್ರದಿಂದ ಅಗ್ನಿಮಿತ್ರನಿಗೆ ತೃಪ್ತಿಯಾಗಲಿಲ್ಲ. ಅಂಥ ಸುಂದರೀರತ್ನವನ್ನು ಕಣ್ಣಾರ ಕಂಡು ಆನಂದಿಸಬೇಕೆಂಬ ಬಯಕೆಯು ಅವನಲ್ಲಿ ಮೂಡಿತು. ಆದರೆ ಅದಕ್ಕೆ ಅವಕಾಶವಿರಲಿಲ್ಲ. ಧಾರಿಣಿಯು ತನ್ನ ಭರ್ತನ ಕಣ್ಣಿಗೆ ಬೀಳದಂತೆ ಮಾಲವಿಕೆಯನ್ನು ರಕ್ಷಿಸುತ್ತಿದ್ದಳು. ಈ ವಿಷಯವು ಅವನಿಗೆ ಆವರೆಗೆ ತಿಳಿದಿರಲಿಲ್ಲ. ಅದು ತಿಳಿದಮೇಲೆ ಏನುಮಾಡಲೂ ತೋಚದೆ ಅವನು ತನ್ನ ನರ್ಮಸಚಿವನಾದ ಗೌತಮನ ಸಹಾಯವನ್ನು ಕೋರಿದನು.

ಚಿತ್ರದಲ್ಲಿ ಮಾಲವಿಕೆಯನ್ನು ಕಂಡಂದಿನಿಂದ ಅಗ್ನಿಮಿತ್ರನಿಗೆ ಅವಳಲ್ಲಿನ ಪ್ರೇಮವು ದಿನದಿನವೂ ಬೆಳೆಯುತ್ತಬಂದಿತು. ಅವಳನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬ ಮನೋಗತವನ್ನು ಪ್ರಕಟಗೊಳಿಸಿ ರಾಣಿಯರಲ್ಲಿ ಮನಸ್ತಾಪವನ್ನು ಕಟ್ಟಿಕೊಳ್ಳಲು ಅವನಿಗೆ ಇಷ್ಟವಿರಲಿಲ್ಲ. ಇದರಮೇಲಾಗಿ ಧಾರಿಣಿಯು ತನ್ನ ಭರ್ತನು ಮಾಲವಿಕೆಯನ್ನು ಚಿತ್ರದಲ್ಲಿ ಕಂಡಂದಿನಿಂದ ಅವನ ಅಭಿಪ್ರಾಯವನ್ನು ಆಶಂಕಿಸಿ, ಅವಳನ್ನು ಮತ್ತಷ್ಟು ಎಚ್ಚರಿಕೆಯಿಂದ ರಕ್ಷಿಸತೊಡಗಿದಳು. ಈ ವಿಷಯವೆಲ್ಲವೂ ಗೌತಮನಿಗೆ ಗೊತ್ತಿದ್ದಿತು. ಅವನು ಒಂದು ಉಪಾಯವನ್ನು ಹೂಡಿದನು.

ಅಗ್ನಿಮಿತ್ರನ ಆಸ್ಥಾನದಲ್ಲಿ ಗಣದಾಸ, ಹರದತ್ತ ಎಂಬ ಇಬ್ಬರು

ನಾಟ್ಯಾಚಾರ್ಯರಿದ್ದರು. ಶಾಸ್ತ್ರಪಾರೀಣತೆಯಲ್ಲಿ ಯಾರಿಗೆ ಯಾರೂ ಅವರಲ್ಲಿ ಕಡಮೆಯಾಗಿರಲಿಲ್ಲ. ಆಟ ಕಲಿಸುವುದರಲ್ಲಿಯೂ ಅವರಿಬ್ಬರೂ ನಿಸ್ಸೀಮರಾಗಿದ್ದರು. ಗಣದಾಸನು ಮಾಲವಿಕೆಯ ಗುರುವಾಗಿದ್ದುದರಿಂದ ಮಹಾರಾಜ್ಞಿಯಾದ ಧಾರಿಣಿಗೆ ಬಹುಮತನಾಗಿದ್ದನು. ಹರದತ್ತನು ಎರಡನೆಯ ರಾಣಿ ಇರಾವತಿಯ ಗುರು; ರಾಜನಿಗೆ ಬಹಳ ಬೇಕಾದವನು. ಈ ಇಬ್ಬರು ಆಚಾರ್ಯರಲ್ಲೂ ಯೋಗ್ಯತೆಯ ವಿಷಯದಲ್ಲಿ ಪರಸ್ಪರ ಜಗಳವನ್ನುಂಟುಮಾಡಿದರೆ ಅವರು ರಾಜನ ಬಳಿಗೆ ತಮ್ಮ ದೂರನ್ನು ತಂದೇತರುವರು. ಅವರ ಸಾಮರ್ಥ್ಯವನ್ನು ಪ್ರದರ್ಶನದ ಮೂಲಕ ಪರೀಕ್ಷಿಸಿದಹೊರತು ಯಾವ ತೀರ್ಮಾನವನ್ನೂ ಮಾಡಲಾಗುವುದಿಲ್ಲ. ಏಕೆಂದರೆ ನಾಟ್ಯವೆಂಬುದು ಪ್ರಯೋಗಪ್ರಧಾನವಾದುದು. ಕೇವಲ ಶಾಸ್ತ್ರಜ್ಞಾನದಿಂದ ಪ್ರಯೋಜನವಿಲ್ಲ. ಶಿಷ್ಯರಲ್ಲಿ ನಾಟ್ಯಜ್ಞಾನವನ್ನುಂಟು ಮಾಡಿ, ಅವರನ್ನು ಪ್ರಯೋಗಕುಶಲರನ್ನಾಗಿ ಮಾಡಿದರೆ ಮಾತ್ರ ಗುರುವಿನ ಪಾಂಡಿತ್ಯವು ಪ್ರಕಟವಾಗಿ ಅವನ ಕೀರ್ತಿಯು ಬೆಳಗುವುದು. ಈ ವಿಷಯವನ್ನು ಗಣದಾಸನು ಬಲ್ಲವನಾದುದರಿಂದ ಮಾಲವಿಕೆಯ ಮೂಲಕ ತನ್ನ ಪಾಂಡಿತ್ಯವನ್ನು ಪ್ರದರ್ಶಿಸದಿರಲಾರನು. ಆಗ ಅರಸನಿಗೆ ಅವಳ ಸಂದರ್ಶನ ಭಾಗ್ಯವು ಲಭಿಸುತ್ತದೆ—ಇದೇ ಗೌತಮನ ಉಪಾಯ.

ಗೌತಮನು ಈ ಉಪಾಯವನ್ನು ಮನಸ್ಸಿನಲ್ಲಿಯೆ ಗುಣಿಸಿಕೊಂಡು, ಆ ಇಬ್ಬರು ಆಚಾರ್ಯರಲ್ಲಿಯೂ ಕಲಹ ಬೀಜವನ್ನು ಬಿತ್ತಿದನು.

ಕಲಹವು ಬೆಳೆಯಿತು. ಗಣದಾಸನು ಹಲವರು ಹಿರಿಯರ ಎದುರಿನಲ್ಲಿ ಹರದತ್ತನಿಗೂ ತನಗೂ ಪಾಂಡಿತ್ಯ ವಿಷಯದಲ್ಲಿ ಕೊಳಕ್ಕೂ ಕಡಲಿಗೂ ಇರುವಷ್ಟು ಅಂತರವೆಂದು ಜರೆದನು. ಹರದತ್ತನಿಗೆ ರೇಗಿತು; ಗಣದಾಸನು ತನ್ನ ಪಾದಧೂಳಿಗೂ ಸಮನಲ್ಲವೆಂದು ಮೂದಲಿಸಿದನು. ಹೀಗೆಯೇ ಮಾತಿಗೆ ಮಾತು ಬೆಳೆದು ಇವರಿಬ್ಬರೂ ಆಸ್ಥಾನಕ್ಕೆ ಬಂದು ತಮ್ಮ ವಿವಾದವನ್ನು ಅರಸನಲ್ಲಿ ಅರಿಕೆಮಾಡಿಕೊಂಡರು.

ಅರಸನಾದರೋ ಈ ವಿವಾದದಲ್ಲಿ ಮಾಧ್ಯಸ್ಥಿಕೆಯನ್ನು ವಹಿಸಲು ಬಯಸಲಿಲ್ಲ. ಹಾಗೆಮಾಡಿದರೆ ಪಕ್ಷಪಾತವಾಯಿತೆಂಬ ಅಪಕೀರ್ತಿ ಬರುವುದೆಂಬ ನೆಪವನ್ನು ಹೂಡಿ ರಾಣಿ ಧಾರಿಣಿಯ ಮತ್ತು ಪಂಡಿತ

ಕೌಶಿಕಿಯ ಎದುರಿನಲ್ಲಿಯೇ ಆ ವಿವಾದವು ಇತ್ಯರ್ಥವಾಗತಕ್ಕದ್ದೆಂದು ಬೆಸಸಿದನು.

ಕೌಶಿಕಿಯೂ ಧಾರಿಣಿಯೂ ಬಂದ ತರುವಾಯ ಅವರಿಗೆ ಆಚಾರ್ಯರ ವಿವಾದವು ತಿಳಿಯಿತು. ಅದು ಏತಕ್ಕೆ ಮೊದಲಾಯಿತೆಂಬುದು ಧಾರಿಣಿಗೆ ತಿಳಿಯದಿದ್ದರೂ ಅವಳು ಏನನ್ನೋ ಆಶಂಕಿಸಿ ಆ ವಿವಾದವೇ ತನ್ನ ಮನಸ್ಸಿಗೆ ರುಚಿಸಲಿಲ್ಲವೆಂದು ಅಭಿಪ್ರಾಯಪಟ್ಟಳು. "ವಿದ್ಯಾವಿಚಾರದಲ್ಲಿ ಆಚಾರ್ಯರಿಬ್ಬರಿಗೂ ವಿವಾದವುಂಟಾಗಿದೆ. ಅದನ್ನು ಪರಿಹರಿಸುವುದು ಯುಕ್ತ. ಪಂಡಿತಕೌಶಿಕಿಯು ಮಾಧ್ಯಸ್ಥಿಕೆಯನ್ನು ವಹಿಸಲಿ, ನಾನೂ ಧಾರಿಣಿಯೂ ಪಕ್ಷಪಾತಿಗಳಾಗಿರುವುದರಿಂದ ಉದಾಸೀನರಾಗಿರುವುದು ನ್ಯಾಯ" ಎಂದು ಅರಸನು ಹೇಳಿದನು.

ಕೌಶಿಕಿಯು ಮಾಧ್ಯಸ್ಥಿಕೆಯನ್ನು ವಹಿಸಿದಳು. "ನಾಟ್ಯಶಾಸ್ತ್ರವು ಪ್ರಯೋಗಪ್ರಧಾನವಾದುದು; ಚರ್ಚೆಗಳಿಂದ ಏನೂ ಪ್ರಯೋಜನವಿಲ್ಲ. ಆದುದರಿಂದ ಪ್ರಯೋಗದ ಮೂಲಕವೇ ಈ ಆಚಾರ್ಯರುಗಳ ಪಾಂಡಿತ್ಯವನ್ನು ಪರೀಕ್ಷಿಸಬೇಕು" ಎಂದು ಆಕೆಯು ತೀರ್ಮಾನಿಸಿ, ಧಾರಿಣಿಯ ಅಭಿಪ್ರಾಯವೇನೆಂದು ಕೇಳಿದಳು. ಧಾರಿಣಿಯು ಆ ವಿವಾದವೇ ತನಗೆ ರುಚಿಸದೆಂದು ಸ್ಪಷ್ಟವಾಗಿ ಹೇಳಿಬಿಟ್ಟಳು. ಅದನ್ನು ಕೇಳಿ ಗಣದಾಸನು, "ದೇವಿಯವರು ನನಗೆ ಅಪಮಾನವಾಗುವಂತೆ ಅಪ್ಪಣೆ ಮಾಡುವುದು ನ್ಯಾಯವೆ, ಧರ್ಮವೆ?" ಎಂದು ನೊಂದು ನುಡಿದನು.

ಗೌತಮನು ಆ ಸಮಯದಲ್ಲಿಯೇ "ಈ ಆಚಾರ್ಯರಿಗೆ ದಂಡದ ಸಂಬಳ ಕೊಡುವುದೇಕೆ? ಟಗರುಗಳಂತೆ ಅವರು ಹೋರಾಡಲಿ, ವಿನೋದವನ್ನಾದರೂ ನೋಡೋಣ" ಎಂದು ಹಾಸ್ಯ ಮಾಡಿದನು. ಧಾರಿಣಿಗೆ ಕೋಪಬಂದಿತು. ಅರಸನು "ಪ್ರಕೃತದಲ್ಲಿ ನಡೆಯಬೇಕಾದ ಕಾರ್ಯವನ್ನು ನಿರ್ಣಯಿಸುವುದಾಗಲಿ" ಎಂದು ಕೌಶಿಕಿಗೆ ತಿಳಿಸಿದನು. ಆಕೆಯು "ಒಳ್ಳೆಯ ಪಾಂಡಿತ್ಯವಿದ್ದರೂ ಶಿಷ್ಯರಿಗೆ ಪಾಠಹೇಳುವುದರಲ್ಲಿ ಕೆಲವರಿಗೆ ಸಾಮರ್ಥ್ಯವಿರುವುದಿಲ್ಲ; ಕೆಲವರು ತಮಗೆ ತಿಳಿದಷ್ಟನ್ನು ಶಿಷ್ಯರಿಗೆ ಬೋಧಿಸುವುದರಲ್ಲಿ ಸಮರ್ಥರಾಗಿರುತ್ತಾರೆ. ಯಾರು ಬೋಧನ ಸಾಮರ್ಥ್ಯವುಳ್ಳವರೋ ಅವರೇ ಶಿಕ್ಷಕಶ್ರೇಷ್ಠರೆಂದು ಹೇಳಬೇಕು.

ಆಚಾರ್ಯರಿಬ್ಬರ ಪಾಂಡಿತ್ಯವೂ ವೇದ್ಯವೇ ಆಗಿದೆ. ಇವರ ಬೋಧನ ಸಾಮರ್ಥ್ಯವನ್ನು ಮಾತ್ರ ನೋಡಬೇಕಾಗಿದೆ. ಆದುದರಿಂದ ಇವರಲ್ಲಿ ನಾಟ್ಯಕಲಿಯುವವರನ್ನು ಪರೀಕ್ಷಿಸಿದರೆ ಇವರ ಮೇಲ್ಮೆಯನ್ನು ನಿರ್ಧರಿಸಬಹುದು" ಎಂದು ತನ್ನ ಖಚಿತವಾದ ಅಭಿಪ್ರಾಯವನ್ನು ವ್ಯಕ್ತಗೊಳಿಸಿದಳು.

ಧಾರಿಣಿಗೆ ಪರಿವ್ರಾಜಿಕೆಯ ಮಾತು ಪಥ್ಯವಾಗಲಿಲ್ಲ. ಅರಸನ ಪಕ್ಷವನ್ನು ಹಿಡಿದು ಮಾತನಾಡುತ್ತಿರುವಳೆಂದು ಅವಳಿಗೆ ಭಾಸ ವಾಯಿತು. ಹೇಗಾದರೂ ಅದಕ್ಕೆ ಅವಕಾಶ ತಪ್ಪಿಸಬೇಕೆಂದು ಬಯಸಿ "ಶಿಷ್ಯೆಯು ಬುದ್ಧಿಹೀನೆಯಾಗಿ ಉಪದೇಶವನ್ನು ಗ್ರಹಿಸ ಲಾರದೆ ಹೋದರೆ ಉಪಾಧ್ಯಾಯನ ದೋಷವೇನು?" ಎಂದಳು. ಅರಸನು "ಅಂತಹ ಶಿಷ್ಯರನ್ನು ಪರಿಗ್ರಹಿಸುವುದೂ ಉಪಾಧ್ಯಾಯನ ಬುದ್ಧಿಲಾಘವವನ್ನು ಪ್ರದರ್ಶಿಸುತ್ತದೆಯೆಂದು ಬಲ್ಲವರು ಹೇಳುತ್ತಾರೆ" ಎಂದನು. ಧಾರಿಣಿಗೆ ಪ್ರತ್ಯುತ್ತರ ಹೇಳಲಾಗಲಿಲ್ಲ. ಮುಂದೇನು ಹೇಳುವುದಕ್ಕೂ ತೋಚದೆ ಅವಳು ಗಣದಾಸನನ್ನು ಕುರಿತು "ಅಯ್ಯಾ, ಆರ್ಯಪುತ್ರನನ್ನು ಮೆಚ್ಚಿಸುವುದಕ್ಕೆ ಇದು ಸಮಯವಲ್ಲ. ವ್ಯರ್ಥವಾದ ಈ ಪ್ರಯತ್ನವನ್ನು ಸಾಕುಮಾಡಿ" ಎಂದಳು. ಅದನ್ನು ಕೇಳಿ ಗೌತಮನು, "ಪೂಜ್ಯಳು ಚೆನ್ನಾಗಿ ಹೇಳಿದಳು. ಸಂಗೀತಾಚಾರ್ಯ ಪದವಿಯಲ್ಲಿದ್ದು ಸರಸ್ವತಿಗೆ ನಿವೇದಿಸಿದ ಕಡುಬುಗಳನ್ನು ಮೆಲ್ಲುವುದು ಬಿಟ್ಟು ಮುಖಭಂಗವಾಗುವ ಈ ವಿವಾದದಿಂದೇನು ಫಲ" ಎಂದು ಚುಚ್ಚುನುಡಿಯಾಡಿ, ಉರಿಯುವ ಬೆಂಕಿಯನ್ನು ಮತ್ತಷ್ಟು ಉರುಬಿದನು.

ವಿದ್ಯಾಪರಿಣತನಾದ ಗಣದಾಸನಿಗೆ ಗೌತಮನ ಈ ಚುಚ್ಚುನುಡಿ ಸಹಿಸದಾಯಿತು. ಅವನು ಧಾರಿಣಿಯನ್ನು ಕುರಿತು, "ಮಹಾರಾಜ್ಞಿ, ಗೌತಮನು ಹೇಳಿದುದು ದಿಟ. ಹೇಗೇ ನಿಂದಿಸಿದರೂ ಲೆಕ್ಕಿಸದೆ, ಮಾನವನ್ನು ತೊರೆದು ಧನಾರ್ಜನೆ ಮಾಡುವುದೇ ಮಾನವನ ಗುರಿಯೆಂದು ಬಗೆದು ಯಾವ ವಿದ್ಯಾವಂತನು ನಡೆಯುವನೋ ಅವನು ವಿದ್ಯಾವಿಕ್ರಯ ಮಾಡುವ ವರ್ತಕನೆಂದು ಹೆಸರಾಗುತ್ತಾನೆ. ತಾವು ನನ್ನನ್ನು ಅಂತಹವರ

ಗುಂಪಿಗೆ ಸೇರಿಸಬಾರದು" ಎಂದನು. ಧಾರಿಣಿಯು, "ನಾನು ನಿಮ್ಮನ್ನು ಅಲ್ಲಗಳೆಯಲು ಹಾಗೆ ಹೇಳಲಿಲ್ಲ. ನಿಮ್ಮ ಶಿಷ್ಯೆಯು ನಿಮ್ಮಲ್ಲಿ ವಿದ್ಯೆ ಕಲಿಯುತ್ತಿರುವುದು ಕೆಲವೇ ದಿನಗಳಿಂದ. ಅಂತಹವಳನ್ನು ಪರೀಕ್ಷೆಗೆ ತರುವುದು ನ್ಯಾಯವಲ್ಲ" ಎಂದು ಹೇಳಿ ಅವನನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದಳು. ಆದರೆ ಅದು ನಿಷ್ಫಲವಾಯಿತು. ಗಣದಾಸನು, "ಆದುದರಿಂದಲೇ ನಾನು ನಿರ್ಬಂಧಿಸುತ್ತಿರುವುದು" ಎಂದುಬಿಟ್ಟನು. ಧಾರಿಣಿಗೆ ಏನು ಹೇಳುವುದಕ್ಕೂ ತೋರದೆ, "ಹಾಗಾದರೆ, ಮಧ್ಯಸ್ಥೆಯಾದ ಈ ಪೂಜ್ಯಳೆದುರಿಗೆ ನಿಮ್ಮ ಉಪದೇಶ ಸಾಮರ್ಥ್ಯವನ್ನು ಪ್ರದರ್ಶಿಸುವುದಾಗಲಿ" ಎಂದಳು. ಪಂಡಿತಕೌಶಿಕಿಯು, "ದೇವಿ, ಇದು ನ್ಯಾಯವಲ್ಲ. ಎಷ್ಟೇ ಸರ್ವಜ್ಞನಾಗಿದ್ದರೂ ಒಬ್ಬ ವ್ಯಕ್ತಿಯ ನಿರ್ಣಯವು ನಿರ್ಣಯವೆನಿಸುವುದಿಲ್ಲ" ಎಂದಳು. ಧಾರಿಣಿಗೆ ತಡೆಯಲಾರದಷ್ಟು ಕೋಪಬಂದಿತು. ಎಷ್ಟೇ ಜಾಗರೂಕಳಾಗಿದ್ದರೂ ತನ್ನ ಮಾತು ನಡೆಯದೆಹೋದುದನ್ನು ಕಂಡು, ಅವಳು ಕೌಶಿಕಿಯನ್ನು ಮೂದಲಿಸಿ ನುಡಿದಳು. ಕಾರಣವಿಲ್ಲದೆ ಮುನಿಯುವುದು ತರವಲ್ಲವೆಂದು ಕೌಶಿಕಿಯು ಅರಸಿಯನ್ನು ಎಚ್ಚರಿಸಿದಳು. ಗೌತಮನು ಧಾರಿಣಿಯ ಮುನಿಸಿಗೆ ಕಾರಣವಿದ್ದೇ ಇರುವುದೆಂದೂ ಅದೂ ಸ್ವಪಕ್ಷರಕ್ಷಣೆಯೇ ಎಂದೂ ಹೇಳಿ, ಗಣದಾಸನ ಕಡೆಗೆ ತಿರುಗಿ, "ಅಯ್ಯಾ, ದೇವಿಯವರಿಂದ ನೀನು ಪಾರಾದೆ. ಸುಶಿಕ್ಷಿತರಾಗಿದ್ದರೇನು? ಉಪದೇಶದಲ್ಲಿ ಎಲ್ಲರೂ ನಿಷ್ಣಾತರಾಗಿರುತ್ತಾರೆಯೆ?" ಎಂದು ಮತ್ತೆ ಅವನನ್ನು ಎತ್ತಿಕಟ್ಟಿದನು.

ಈ ಅಪಮಾನವಾಕ್ಯಗಳು ಗಣದಾಸನನ್ನು ಕೆರಳಿಸಿದುವು. ಜನರು ತನ್ನನ್ನು ಅಸಮರ್ಥನೆಂದು ನಿಂದಿಸುವುದೂ, ಸಮರ್ಥನಾಗಿದ್ದರೂ ತಾನು ಅದಕ್ಕೆ ಪಾತ್ರನಾಗುವುದೂ ಅವನ ಮನಸ್ಸಿಗೆ ಬಂದು, ರೋಷವುಕ್ಕೇರಿತು; "ಈ ವಿವಾದದಲ್ಲಿ ಶಿಷ್ಯೆಯ ಮೂಲಕ ನನ್ನ ಉಪದೇಶ ಸಾಮರ್ಥ್ಯವನ್ನು ಪ್ರದರ್ಶಿಸಲು ತಾವು ಅನುಜ್ಞೆಕೊಡದಿದ್ದರೆ, ನನ್ನನ್ನು ತಾವು ತೊರೆದಂತಾಯಿತು. ಇನ್ನು ನನಗೆ ಇಲ್ಲಿ ಎಡೆಯಿಲ್ಲ" ಎಂದು ಧಾರಿಣೀದೇವಿಗೆ ತಿಳಿಸಿ ಹೊರಡಲನುವಾದನು. ಧಾರಿಣಿಗೆ ದಿಕ್ಕು ತೋರದೆ ಹೋಗಿ ಕಡೆಗೆ, "ಗುರುಗಳಿಗೆ ಶಿಷ್ಯರಲ್ಲಿ ಸರ್ವಾಧಿಕಾರ

ವುಂಟು. ನನ್ನ ಅನುಜ್ಞೆ ಪಡೆಯುವುದು ಅನಾವಶ್ಯಕ" ಎಂದು ಹೇಳಿ ಅವನನ್ನು ಸಮಾಧಾನಪಡಿಸಿದಳು.

ಇದಾದಮೇಲೆ ನಾಟ್ಯಶಾಸ್ತ್ರದ ಯಾವ ವಿಷಯದಲ್ಲಿ ಪ್ರದರ್ಶನವು ನಡೆಯಬೇಕೆಂಬ ಪ್ರಶ್ನೆ ಬಂದಿತು. ಶರ್ಮಿಷ್ಠೆಯು ರಚಿಸಿದ 'ಚಲಿತ' ವೆಂಬ ನಾಟ್ಯದಲ್ಲಿ ಇಬ್ಬರು ಆಚಾರ್ಯರೂ ತಮ್ಮ ಸಾಮರ್ಥ್ಯವನ್ನು ಪ್ರದರ್ಶಿಸಬೇಕೆಂದು ತೀರ್ಮಾನವಾಯಿತು. ನಾಟ್ಯ ಪ್ರದರ್ಶನಕ್ಕೆ ಸಜ್ಜುಗೊಳಿಸಲು ಇಬ್ಬರೂ ಸಂಗೀತಶಾಲೆಗೆ ಹೊರಟುಹೋದರು. ಧಾರಿಣಿಯು "ಇಂತಹ ಜಾಣ್ಮೆಯನ್ನು ರಾಜಕಾರ್ಯಗಳಲ್ಲಿ ಪ್ರಯೋಗಿಸಿದ್ದರೆ ಬಹಳ ಚೆನ್ನಾಗಿರುತ್ತಿತ್ತು" ಎಂದು ಅರಸನನ್ನು ಮೂದಲಿಸಿ ಪರಿವ್ರಾಜಿಕೆಯೊಡನೆ ಹೊರಟುಹೋಗುವುದರಲ್ಲಿದ್ದಳು. ಆ ಹೊತ್ತಿಗೆ ಸರಿಯಾಗಿ ಸಂಗೀತಶಾಲೆಯಲ್ಲಿ ಮೃದಂಗ ಧ್ವನಿಯು ಕೇಳಬಂದಿತು.

ಎಲ್ಲರೂ ಸಂಗೀತಶಾಲೆಯಲ್ಲಿ ಸೇರಿದಮೇಲೆ, ನಾಟ್ಯಾಚಾರ್ಯರಲ್ಲಿ ಯಾರ ಉಪದೇಶವು ಮೊದಲು ಪರೀಕ್ಷಿಸತಕ್ಕುದು ಎಂಬ ವಿಷಯವು ಜಿಜ್ಞಾಸೆಗೆ ಬಂದಿತು. ಇಬ್ಬರೂ ಜ್ಞಾನವೃದ್ಧರೆಂಬುದು ನಿರ್ವಿವಾದವಾದರೂ ಗಣದಾಸನು ವಯೋವೃದ್ಧನಾದುದರಿಂದ ಅವನಿಗೇ ಮೊದಲು ಅವಕಾಶಕೊಡಬೇಕೆಂದು ಪರಿವ್ರಾಜಿಕೆಯು ತೀರ್ಸಿತ್ತಳು. ಅದರಂತೆ ಗಣದಾಸನು ಉಚಿತಾಲಂಕಾರಭೂಷಿತೆಯಾದ ತನ್ನ ಶಿಷ್ಯೆ ಮಾಲವಿಕೆಯನ್ನು ರಂಗದಮೇಲೆ ಪ್ರವೇಶಗೊಳಿಸಿದನು.

ಅರಸನು ಮಾಲವಿಕೆಯನ್ನು ಪ್ರತ್ಯಕ್ಷವಾಗಿ ಕಂಡುದು ಅದೇ ಮೊದಲು. ಚಿತ್ರದಲ್ಲಿ ಅವಳನ್ನು ಕಂಡಾಗಲೇ ಅವಳ ಅನುಪಮ ಸೌಂದರ್ಯಕ್ಕೆ ಮುಗ್ಧನಾಗಿ ತನ್ನ ಹೃದಯವನ್ನೇ ಅವಳಿಗೆ ಸೂರೆಗೊಟ್ಟಿದ್ದನು. ಈಗ ಪ್ರತ್ಯಕ್ಷವಾಗಿ ಕಂಡಮೇಲಂತೂ ಅವನಲ್ಲಿ ಮೂಡಿದ್ದ ಪ್ರೇಮವು ನೂರುಮಡಿಯಾಯಿತು. ಆಗಿನ ಅವಳ ರೂಪ ವೈಖರಿ, ನಿಲುವು, ನೋಟ, ಬೆಡಗು, ಒಯ್ಯಾರಗಳನ್ನು ಕಂಡು ಈ ಅಪೂರ್ವ ಸೌಂದರ್ಯವು ಚಿತ್ರದಲ್ಲಿ ತೋರಲಿಲ್ಲವಾಗಿ, ಚಿತ್ರಕಾರನು ಅಷ್ಟು ನಿಪುಣನಲ್ಲವೆಂದು ಅರಸನು ಭಾವಿಸಿದನು.

ಮೊದಲೆ ನಿರ್ಣಯವಾಗಿದ್ದಂತೆ ಮಾಲವಿಕೆಯು, ಶರ್ಮಿಷ್ಠೆಯು

ರಚಿಸಿದ್ದ ಚಲಿತ ನಾಟ್ಯದ ಹಾಡನ್ನು ಹಾಡಿ ನರ್ತಿಸತೊಡಗಿದಳು. ಪ್ರಣಯಿನಿಯೊಬ್ಬಳು ತನ್ನ ಹೃದಯವಲ್ಲಭನಿಗಾಗಿ ತನ್ನ ಸರ್ವಸ್ವವನ್ನೂ ನಿವೇದಿಸುವುದೇ ಆ ಹಾಡಿನ ಹುರುಳಾಗಿದ್ದಿತು. ಮಾಲವಿಕೆಯು ಆ ಹಾಡನ್ನು ಹಾಡಿದ ರೀತಿ, ಅದಕ್ಕೆ ತಕ್ಕಂತೆ ಅಭಿನಯಿಸಿದ ಭಾವ, ಆ ಭಾವಾನುಗುಣವಾದ ಅಂಗಾಂಗ ಚಲನ,—ಇವೆಲ್ಲವೂ ಅಗ್ನಿಮಿತ್ರನಲ್ಲಿ ಮೂಡಿದ್ದ ಪ್ರೇಮವನ್ನು ಮತ್ತಷ್ಟು ಬಲಗೊಳಿಸಿತು. ಮಾಲವಿಕೆಯು ಹಾಡಿದ ಹಾಡೆಲ್ಲವನ್ನೂ ತನಗೇ ಅನ್ವಯಿಸಿಕೊಂಡು ಅವನು ಪರವಶನಾಗಿ ಹೋದನು.

ನರ್ತನವು ಮುಗಿಯಿತು. ಮಾಲವಿಕೆಯು ನೇಪಥ್ಯಾಭಿಮುಖವಾಗಿ ಹೊರಟಳು. ಅವಳು ಅಷ್ಟುಬೇಗನೆ ನಿಷ್ಕ್ರಮಿಸುವುದು ಅರಸನಿಗೆ ರುಚಿಸಲಿಲ್ಲ. ಅವಳ ದರ್ಶನಭಾಗ್ಯವನ್ನು ಇದಷ್ಟು ಹೊತ್ತು ಅನುಭವಿಸಿ, ಕಣ್ಮನಗಳಿಗೆ ಹಬ್ಬಮಾಡಿಕೊಳ್ಳಬೇಕೆಂಬುದು ಅವನ ಬಯಕೆಯಾಗಿದ್ದಿತು. ಬಳಿಯಲ್ಲಿಯೇ ಕುಳಿತಿದ್ದ ಗೌತಮನಿಗೆ ಅರಸನ ಈ ಇಂಗಿತವು ತಿಳಿಯಿತು. ಯಾವುದಾದರೂ ಕುಂಟುನೆಪ ಹೂಡಿ ಮಾಲವಿಕೆಯನ್ನು ಮತ್ತಷ್ಟು ಹೊತ್ತು ರಂಗದಲ್ಲಿ ನಿಲ್ಲಿಸಲು ಯೋಚಿಸಿದನು. "ಪೂಜ್ಯಳು ಸ್ವಲ್ಪ ನಿಲ್ಲಬೇಕು. ನರ್ತನದಲ್ಲಿ ಸ್ವಲ್ಪ ಕ್ರಮ ತಪ್ಪಿದೆ. ಅದನ್ನೀಗ ಪ್ರಶ್ನಿಸುತ್ತೇನೆ" ಎಂದನು. ನಿಷ್ಕ್ರಮಿಸುತ್ತಿದ್ದ ಮಾಲವಿಕೆ ಅಂಜಿ ನಿಂತಳು. ಗಣದಾಸನಿಗೆ ತಪ್ಪಿರುವ ಕ್ರಮ ಯಾವುದೆಂದು ತಿಳಿಯಲಿಲ್ಲ. ಯಾರೊಬ್ಬರಿಗೂ ಗೋಚರವಾಗದಿದ್ದ ದೋಷವು ಗೌತಮನಿಗೆ ಗೋಚರವಾದುದು ಹೇಗೆಂದು ಎಲ್ಲರೂ ಆಶ್ಚರ್ಯಪಟ್ಟರು. ಧಾರಿಣಿಯಂತೂ ಕಲಹಪ್ರಿಯನಾದ ಗೌತಮನ ನುಡಿಗಳಿಗೆ ಬೆಲೆ ಕಟ್ಟಕೂಡದೆಂದು ಗಣದಾಸನನ್ನೆಚ್ಚರಿಸಿದಳು. ಅರಿತವರ ಸಂಗಬಲದಿಂದ ಎಂತಹ ಗಾವಿಲನಾದರೂ ಅರಿತವನಾಗುವನೆಂಬುದು ಗಣದಾಸನ ಮತ; ದಿಟವಾಗಿಯೂ ಕ್ರಮ ತಪ್ಪಿರಬಹುದೆಂದು ಊಹಿಸಿ ಅಳುಕಿದನು. ಆದರೆ ಅವನ ಊಹೆಯೆಲ್ಲ ಬರಿದಾಯಿತು. ಗೌತಮನು ಪ್ರಥಮೋಪದೇಶ ಪ್ರದರ್ಶನದಲ್ಲಿ ಬ್ರಾಹ್ಮಣನಿಗೆ ಪ್ರಥಮಪೂಜೆ ಸಲ್ಲಬೇಕಾಗಿದ್ದುದು ಸಲ್ಲಲಿಲ್ಲವೆಂದು ಕುಹಕಮಾಡಿದನು. ಈ ಮಾತು ಎಲ್ಲರನ್ನೂ ನಗೆಗಡಲಲ್ಲಿ ಮುಳುಗಿಸಿತು.

ಮಾಲವಿಕೆಗೂ ನಗೆ ಬಂದಿತು. ಸ್ಮಿತಮುಖಿಯಾದ ಅವಳನ್ನು ಕಂಡು ಅರಸನಿಗೆ ಅಮಿತಾನಂದವಾಯಿತು. ಗೌತಮನ ಬಯಕೆಯು ಈಡೇರಿತು. ಗೌತಮನು ಅಷ್ಟಕ್ಕೇ ಸುಮ್ಮನಾಗದೆ ಇನ್ನೂ ಸ್ವಲ್ಪ ಸ್ವಾತಂತ್ರ್ಯ ವಹಿಸಿ ಅರಸನ ಕೈಕಡಗವನ್ನು ಸೆಳೆದುಕೊಂಡು ಅದನ್ನು ಗಣದಾಸನಿಗೆ ಬಹುಮಾನವಾಗಿ ಕೊಡಹೋದನು. ಧಾರಿಣಿಗೆ ತಡೆಯುದಷ್ಟು ಕೋಪಬಂದಿತು. ಮತ್ತೊಬ್ಬ ಆಚಾರ್ಯನ ಸಾಮರ್ಥ್ಯವನ್ನು ಪರೀಕ್ಷಿಸದೆ ಯಾವುದನ್ನೂ ನಿರ್ಣಯಿಸಕೂಡದೆಂದೂ, ಬಹುಮಾನ ವಿನಿಯೋಗಕ್ಕೆ ಅದು ಸಮಯವಲ್ಲವೆಂದೂ ಗೌತಮನನ್ನು ಗಜರಿದಳು. ಗೌತಮನು ಪೆಚ್ಚುಬಿದ್ದು ಸುಮ್ಮನಾದನು. ಗಣದಾಸನು ಮಾಲವಿಕೆಯೊಡನೆ ಹೊರಟುಹೋದನು.

ಇದಾದಮೇಲೆ ಹರದತ್ತನು ತನ್ನ ಪ್ರಯೋಗ ಪರೀಕ್ಷೆಗೆ ಅವಕಾಶವೀಯಬೇಕೆಂದು ಪ್ರಾರ್ಥಿಸಿದನು. ದೊರೆಗೆ ನಾಟ್ಯ ಪ್ರದರ್ಶನದ ಫಲವು ಆವೇಳೆಗಾಗಲೇ ದೊರಕಿದ್ದಿತು. ಹರದತ್ತನ ಪ್ರಯೋಗಾವಲೋಕನವು ಅವನಿಗೆ ಬೇಕಾಗಿರಲಿಲ್ಲ. ಆದರೂ ದಾಕ್ಷಿಣ್ಯವು ಅವನನ್ನು ಒಡಂಬಡಿಸಿತು. ಹರದತ್ತನು ಪ್ರದರ್ಶನಕ್ಕೆ ಸಜ್ಜುಗೊಳಿಸುವುದಕ್ಕೆ ತೆರಳುವುದರಲ್ಲಿರಲು ವೈತಾಳಿಕನು ಮಧ್ಯಾಹ್ನಸಮಯವಾಗಿರುವುದೆಂದು ಅರಸನನ್ನು ಎಚ್ಚರಿಸಿದನು. ಗೌತಮನು ಈ ಸಂಧಿಯನ್ನುಪಯೋಗಿಸಿಕೊಂಡು "ಭೋಜನಸಮಯವನ್ನು ಮೀರುವುದು ಒಳ್ಳಿತಲ್ಲವೆಂದು ವೈದ್ಯರು ಅಭಿಪ್ರಾಯಪಡುವರಲ್ಲವೆ?" ಎಂದನು. ಅರಸನು ಆ ಮಾತಿಗೆ ತಲೆದೂಗಿ ಹರದತ್ತನ ಉಪದೇಶಸಾಮರ್ಥ್ಯವನ್ನು ಮರುದಿನ ನೋಡುವುದಾಗಿ ಹೇಳಿ ಅವನನ್ನು ಬೀಳ್ಕೊಟ್ಟನು.

ಮರುದಿನ ಹರದತ್ತನ ಉಪದೇಶಸಾಮರ್ಥ್ಯವು ಪ್ರದರ್ಶಿತವಾಯಿತು. ಅವನ ಶಿಷ್ಯೆಯಾದ ಇರಾವತಿಯು ಅದೇ ಚಲಿತನಾಟ್ಯವನ್ನು ಏನೊಂದೂ ಕುಂದುಕೊರತೆಗಳಿಲ್ಲದೆ ಅಭಿನಯಿಸಿದಳು. ಅದರಿಂದ ಮಾಧ್ಯಸ್ಥಿಕೆಯನ್ನು ವಹಿಸಿದ್ದ ಪರಿವ್ರಾಜಿಕೆಯು ಇಬ್ಬರು ಆಚಾರ್ಯರೂ ಶಾಸ್ತ್ರದಲ್ಲಿ ಉಪದೇಶದಲ್ಲಿ ಸಮಪ್ರವೀಣರು. ಆದರೂ ಶಿಷ್ಯೆಯಾದ ಮಾಲವಿಕೆಯ ಗುಣೋತ್ಕರ್ಷದಿಂದ ಆಚಾರ್ಯ ಗಣದಾಸನು ಹೆಚ್ಚು

ಮನ್ನಣೆಗೆ ಪಾತ್ರನಾಗಿರುವನು” ಎಂದು ಇತ್ಯರ್ಥಮಾಡಿದಳು. ಎಲ್ಲರಿಗೂ ಸಮಾಧಾನವಾಯಿತೋ ಇಲ್ಲವೋ ಹೇಳಲಾಗದಿದ್ದರೂ ಗೌತಮನು ಆಚಾರ್ಯರಲ್ಲಿ ಬೆಳೆಸಿದ್ದ ಕಲಹವಂತೂ ಕೊನೆಗಂಡಿತು.

ಮಾಲವಿಕೆಯನ್ನು ರಂಗದಮೇಲೆ ಕಂಡಾಗಿನಿಂದ ಅಗ್ನಿಮಿತ್ರನ ಮನಸ್ಸೆಲ್ಲ ಅವಳಲ್ಲಿಯೇ ಲೀನವಾಗಿಹೋಯಿತು. ಕೆಲವೇ ದಿನಗಳಲ್ಲಿ ವಿರಹವ್ಯಥೆಯಿಂದ ಅವನ ಶರೀರವು ಸವೆಯಿತು. ಅಂತಃಪುರದ ಯಾವ ಭೋಗಭಾಗ್ಯಗಳೂ ಅವನಿಗೆ ಬೇಡವಾದುವು. ಮಾಲವಿಕೆಯನ್ನು ನೆನೆನೆನೆದು, ಅವಳ ದರ್ಶನಕ್ಕಾಗಿ ಹಂಬಲಿಸಿದನಾದರೂ, ಅವನು ಅದಕ್ಕೆ ಅನುವು ದೊರೆಯದೆ ಹೃದಯಪರಿತಾಪಕ್ಕೆ ತುತ್ತಾದನು. ತಾನು ಮಾಲವಿಕೆಯನ್ನು ಪ್ರೀತಿಸಿರುವುದು ದಿಟವಾದರೂ ಅವಳಿಗೆ ತನ್ನಲ್ಲಿ ಅದೇ ಪ್ರೇಮವಂಕುರಿಸಿದೆಯೇ ಎಂಬುದು ಅವನಿಗೆ ತಿಳಿಯದಾಗಿತ್ತು. ಒಮ್ಮೊಮ್ಮೆ ಆ ಚಲಿತನಾಟ್ಯಸಮಯದಲ್ಲಿ ಅವಳು ಹಾಡಿದ್ದ ಶರ್ಮಿಷ್ಠೆಯ ಹಾಡನ್ನು ನೆನೆದು, ಪರಾಧೀನೆಯಾದ ತನ್ನನ್ನು ರಕ್ಷಿಸಬೇಕೆಂಬ ಆ ಹಾಡಿನ ಚರಣವೊಂದನ್ನು ತನಗಾಗಿಯೇ ಉದ್ದೇಶಿಸಿದಂತೆ ಭಾವಿಸಿ ಆರೋಪಿಸಿಕೊಂಡು ತನ್ನಲ್ಲಿ ಅವಳಿಗೆ ಪ್ರೇಮವಂಕುರಿಸಿದ್ದರೂ ಇರಬಹುದೆಂದು ತೃಪ್ತಿಪಟ್ಟುಕೊಂಡನು. ಆದರೂ ನಿಜವಾದ ಸಂಗತಿಯನ್ನು ತಿಳಿಯಲು ಅವನಿಗೆ ಮತ್ತೆ ಗೌತಮನ ಸಹಾಯವೇ ಬೇಕಾಯಿತು.

ಗೌತಮನು ಮಾಲವಿಕೆಯ ಸಹಚರಿಯಾದ ಬಕುಲಾವಲಿಕೆಯನ್ನು ಕಂಡು ರಾಜನ ಅಭೀಷ್ಟವನ್ನವಳಿಗೆ ತಿಳಿಸಿ, ಹೇಗಾದರೂ ಆ ಕಾರ್ಯವನ್ನು ಸಾಧಿಸಬೇಕೆಂದು ಅವಳನ್ನು ಪ್ರೇರಿಸಿದನು. ಬಕುಲಾವಲಿಕೆಯೂ ನಾಗರಕ್ಷಿತವಾದ ನಿಧಿಯಂತೆ ಹಗಲಿರುಳೂ ಧಾರಿಣಿಯ ರಕ್ಷಣೆಯಲ್ಲಿರುವ ಮಾಲವಿಕೆಯ ಸ್ಥಿತಿಯನ್ನು ಗೌತಮನಿಗೆ ತಿಳಿಸಿ, ಅದು ಕಷ್ಟಸಾಧ್ಯವಾದರೂ ಸಮಯವರಿತು ಕೈಗೂಡಿಸುವುದಾಗಿ ಮಾತುಕೊಟ್ಟಳು.

ಗೌತಮನು ಈ ವಿಚಾರವೆಲ್ಲವನ್ನೂ ಅರಸನಿಗೆ ಅರಿಕೆಮಾಡಿದನು. ಇದರಿಂದ ಅವನಿಗೆ ಸ್ವಲ್ಪಮಟ್ಟಿಗೆ ಸಮಾಧಾನವಾಯಿತು. ಇಬ್ಬರೂ ಪರಸ್ಪರವಾಗಿ ಮಾಲವಿಕೆಯ ವಿಷಯವನ್ನು ಮಾತನಾಡಿಕೊಳ್ಳುತ್ತಿರುವಲ್ಲಿ ಇರಾವತಿಯು ರಕ್ತಕುರವಕ ಕುಸುಮಗಳನ್ನು ಅರಸನಿಗೆ ಉಪಾಯನ

ವಾಗಿ ಕಳುಹಿಸಿ, ಅವನೊಡನೆ ದೋಲಾಧಿರೋಹಣವನ್ನು ಅನುಭವಿಸಲು ಬಯಸಿರುವುದಾಗಿ ಹೇಳಿಕಳುಹಿಸಿದ್ದುದನ್ನೂ ಅರಸನು ಮೊದಲೇ ಅದಕ್ಕೆ ಒಪ್ಪಿದ್ದುದನ್ನೂ ಗೌತಮನು ಅರಸನಿಗೆ ಜ್ಞಾಪಿಸಿದನು. ಆದರೆ ಮನಸ್ಸೆಲ್ಲ ಮಾಲವಿಕೆಯನ್ನು ಸೇರಿದ್ದುದರಿಂದ ಅರಸನಿಗೆ ಅವಳನ್ನುಳಿದು ಬೇರೊಂದು ಯೋಚನೆಯೇ ಇರಲಿಲ್ಲ. ಶುಷ್ಕ ಪ್ರೇಮದ ಸೋಗನ್ನು ಹಾಕಿಕೊಂಡು ಪ್ರಣಯವತಿಯಾದ ಇರಾವತಿಯ ಮನಸ್ಸಿಗೆ ನೋವನ್ನುಂಟುಮಾಡುವುದು ಅವನಿಗೆ ರುಚಿಸಲಿಲ್ಲ. ಆದರೆ ಗೌತಮನು, ಅಂತಃಪುರದವರ ದಾಕ್ಷಿಣ್ಯವನ್ನು ಅಷ್ಟು ಬೇಗ ಕಳೆದುಕೊಳ್ಳುವುದು ಯುಕ್ತವಲ್ಲವೆಂದು ಅವನಿಗೆ ಹೇಳಿ, ಉದ್ಯಾನದಲ್ಲಿ ಅರಸನಿಗಾಗಿ ಕಾದಿರುವ ಇರಾವತಿಯನ್ನು ನೋಡಲು ಅವನನ್ನು ಕರೆದೊಯ್ದನು.

ಗೌತಮನೂ ಅಗ್ನಿಮಿತ್ರನೂ ಉದ್ಯಾನದ ರಾಮಣೀಯಕವನ್ನು ನೋಡಿ ಆನಂದಿಸುತ್ತಿರುವಲ್ಲಿ ಒಂದು ವಿಚಿತ್ರವು ನಡೆಯಿತು. ಆ ಹೊತ್ತಿಗೆ ಇರಾವತಿಯು ಇನ್ನೂ ಬಂದಿರಲಿಲ್ಲ. ಇಬ್ಬರೂ ಅತ್ತಿತ್ತ ಸುಳಿದಾಡುತ್ತಿರಲು, ಮಾಲವಿಕೆಯು ಅಲ್ಲಿಗೆ ಬಂದಳು. ಅರಸನನ್ನು ಕಂಡಂದಿನಿಂದ ಅವಳ ಮನಸ್ಸು ಅವನಿಗಾಗಿಯೇ ಸೂರೆಯಾಗಿದ್ದಿತು. ಅವಳೂ ಅರಸನಂತೆಯೇ ವಿರಹಸಂತಪ್ತೆಯಾಗಿ ಸವೆದಿದ್ದಳು. ಅವಿಜ್ಞಾತಹೃದಯನಾದ ಅವನನ್ನರಸುವುದು ಯುಕ್ತವಲ್ಲವೆಂದು ಒಮ್ಮೊಮ್ಮೆ ಅವಳು ವಿರಾಗವನ್ನು ವಹಿಸುವಳು. ಆದರೂ ಅವಳಲ್ಲಿ ಮೂಡಿದ್ದ ಪ್ರೇಮವು ಆ ವಿರಕ್ತಭಾವವನ್ನು ತಳ್ಳಿ ತಾನೇ ತಾನಾಗಿ ಅವಳನ್ನು ಸಂತಾಪಕ್ಕೆ ಗುರಿಯಾಗಿಸುತ್ತಿದ್ದಿತು. ಇಂತಹ ಸ್ಥಿತಿಯಲ್ಲಿಯೇ ಧಾರಿಣಿಯೂ ಅವಳಿಗೆ ಒಂದು ಕಾರ್ಯವನ್ನು ವಹಿಸಿದ್ದಳು. ಉದ್ಯಾನದಲ್ಲಿ ಅಶೋಕವೃಕ್ಷವು ಕುಸುಮಿಸದೆ ಹೋಗಿರುವುದನ್ನು ಮಧುಕರಿಕೆಯಿಂದ ತಿಳಿದು, ಯುವತಿಯ ಚರಣತಾಡನವೇ ಅದಕ್ಕೆ ದೋಹದಕ್ರಿಯೆಯೆಂದು ಕೃಷಿಶಾಸ್ತ್ರದಲ್ಲಿ ಹೇಳಿದ್ದಂತೆ ಮಾಡಲು ದೋಲೋತ್ಸವದಲ್ಲಿ ಜಾರಿಬಿದ್ದು ಕಾಲು ಉಳುಕಿ ತಾನು ಅಸಮರ್ಥಳಾಗಿದ್ದುದರಿಂದ ಅದನ್ನು ಮಾಲವಿಕೆಯಿಂದ ಮಾಡಿಸಬಯಸಿ ಬಕುಲಾವಲಿಕೆಯೊಡನೆ ಅವಳನ್ನು ಉದ್ಯಾನಕ್ಕೆ ಕಳುಹಿಸಿದ್ದಳು.

ಬಕುಲಾವಲಿಕೆಯು ಚರಣಾಲಂಕಾರವನ್ನು ಕೊಂಡುಬರಲು ಸ್ವಲ್ಪ ತಡವಾದುದರಿಂದ ಮಾಲವಿಕೆಯು ಒಂಟಿಯಾಗಿ ಉದ್ಯಾನವನ್ನು ಪ್ರವೇಶಿಸಿ ತನ್ನಷ್ಟಕ್ಕೆ ತಾನೇ ವಿರಹತಾಪವನ್ನು ಅನುಭವಿಸಿಕೊಳ್ಳು ತ್ತಿದ್ದಳು. ಅರಸನೂ ಗೌತಮನೂ ಅವಳನ್ನು ಕಂಡರು. ಅರಸನ ಆನಂದಕ್ಕೆ ಪಾರವಿಲ್ಲವಾಯಿತು. ಆದರೂ ಒಬ್ಬೊಂಟಿಗಳಾಗಿ ಅವಳೇಕೆ ಉದ್ಯಾನಕ್ಕೆ ಬಂದಳೆಂಬುದು ಅವನಿಗೆ ತಿಳಿಯಲಿಲ್ಲ. ಅವಳ ಮುಖದ ಪೇಲವ ಭಾವವನ್ನು ಕಂಡು ಅವಳೂ ವಿರಹಕಾತರೆಯಾಗಿರುವಳೇ ಎಂದು ಅವನು ಶಂಕಿಸಿದನು. ಸಮೀಪದ ಲತಾಕುಂಜದಲ್ಲಿ ಮರೆಯಾಗಿ ನಿಂತು ಅವಳಾಡುತ್ತಿದ್ದ ಮಾತುಗಳನ್ನಾಲಿಸಿ ಸ್ಪಷ್ಟಾಸ್ಪಷ್ಟವಾಗಿ ಅಲ್ಲೊಂದು ಇಲ್ಲೊಂದು ಕೇಳಬಂದ ಅವಳ ವಿರಹವ್ಯಂಜಕ ಶಬ್ದ ಗಳನ್ನು ಕೇಳಿ, ಅವನ ಮನಸ್ಸು ಸ್ವಲ್ಪ ತಣಿಯಿತು.

ಆ ಹೊತ್ತಿಗೆ ಬಕುಲಾವಲಿಕೆಯು ಚರಣಾಲಂಕಾರವನ್ನು ತಂದು, ಅವಳ ಪಾದಗಳನ್ನು ಲತ್ತಿಗೆಯ ರೇಖೆಗಳಿಂದ ಅಲಂಕರಿಸಿ, ಧಾರಿಣಿಯ ನೂಪುರಗಳನ್ನು ತೊಡಿಸಿದಳು. ಅವಳು ಅದೇ ಸಮಯವನ್ನೇ ಉಪ ಯೋಗಿಸಿಕೊಂಡು, ಮಹಾರಾಜನು ಮಾಲವಿಕೆಯನ್ನು ಬಯಸಿರುವು ದಾಗಿಯೂ ಅವಳ ಭಾಗ್ಯಕ್ಕೆ ಎಣೆಯಿಲ್ಲವೆಂಬುದಾಗಿಯೂ ತಿಳಿಸಿ, ಅವಳೂ ಅರಸನಲ್ಲಿ ಅನುರಕ್ತೆಯಾಗಿರುವುದನ್ನರಿತು, ತನ್ನ ಕಾರ್ಯವು ಸಫಲವಾದುದನ್ನು ಕಂಡು ಹಿಗ್ಗಿದಳು. ಚರಣಾಲಂಕಾರವು ಮುಗಿ ದಿದ್ದುದರಿಂದ ಬಕುಲಾವಲಿಕೆಯ ಪ್ರೇರಣೆಯಂತೆ ಮಾಲವಿಕೆಯು ಅಶೋಕ ವೃಕ್ಷಕ್ಕೆ ಚರಣತಾಡನವನ್ನೆಸಗಿ ದೋಹದ ಕ್ರಿಯೆಯನ್ನು ಮುಗಿಸಿದಳು.

ಅರಸನು ಬಕುಲಾವಲಿಕೆ ಮಾಲವಿಕೆಯರ ಸಂಭಾಷಣೆಯಿಂದ ಮಾಲವಿಕೆಯು ತನ್ನಲ್ಲಿ ಅನುರಕ್ತೆಯಾಗಿರುವುದನ್ನು ಅರಿತು ಆನಂದ ದಿಂದ ಮೈಮರೆತನು. ಯಾವುದಾದರೂ ನೆಪದಿಂದ ಅವಳ ಬಳಿ ಸಾರ ಬೇಕೆಂದು ಅವನಿಗೆ ಬಯಕೆಯಾಯಿತು. ಗೌತಮನೂ ಅದಕ್ಕೆ ನೆರವಾಗಿ, ಆ ಬಾಲಿಕೆಯರ ಬಳಿ ಸಾರಿ, "ಎಲೌ, ಅರಸನಿಗೆ ಅತ್ಯಂತ ಪ್ರಿಯಕರವಾದ ಈ ಅಶೋಕವೃಕ್ಷವನ್ನು ಎಡೆಗಾಲಿಂದ ಒದೆಯುವುದು ನಿನಗೆ ತರವೆ?"

ಎಂದನು. ಮಾಲವಿಕೆ ಬಕುಲಾವಲಿಕೆಯರಿಬ್ಬರೂ ಅರಸನನ್ನೂ ಗೌತಮನನ್ನೂ ನೋಡಿ ಬೆದರಿ ಬೆರಗಾಗಿಹೋದರು.

ಈ ಮೊದಲೆ ಇರಾವತಿಯು ತನ್ನ ಸಖಿಯಾದ ನಿಪುಣಿಕೆಯೊಡನೆ ಉದ್ಯಾನವನ್ನು ಪ್ರವೇಶಿಸಿ ಅಲ್ಲಿ ಅರಸನನ್ನು ಕಾಣದೆ ಅತ್ತಿತ್ತ ಹುಡುಕಿ ಅವನೂ ಗೌತಮನೂ ಬಕುಲಾವಲಿಕೆ ಮಾಲವಿಕೆಯರ ಸಂಭಾಷಣೆಯನ್ನು ಹೊಂಚಿ ಕೇಳುತ್ತಿದ್ದುದನ್ನು ಕಂಡು ತಾನೂ ಅಲ್ಲಿಗೆ ಬಂದು ಮರೆಯಲ್ಲಿ ನಿಂತಿದ್ದಳು. ಇದು ಯಾರಿಗೂ ಅರಿವಾಗಲಿಲ್ಲ. ಬಕುಲಾವಲಿಕೆ ಮಾಲವಿಕೆಯರ ಸಂಭಾಷಣೆಯನ್ನು ಕೇಳುತ್ತ ಕೇಳುತ್ತ ಇರಾವತಿಯು ಕೆರಳಿಹೋದಳು. ತನ್ನ ವಲ್ಲಭನನ್ನು ಮಾಲವಿಕೆಯು ಕಾಮಿಸುತ್ತಿರುವುದನ್ನು ತಿಳಿದಂತೂ ಅವಳ ಕೋಪವು ಮಿತಿಮೀರಿಹೋಯಿತು. ಅರಸನೂ ಗೌತಮನೂ ಮಾಲವಿಕೆಯ ಬಳಿ ಸಾರಿದುದನ್ನು ಕಂಡು ಕೋಪವನ್ನು ತಡೆಯಲಾರದೆ ಅವಳು ಮೈಮರೆತಳು. ಅರಸನು, "ಅನನ್ಯ ರುಚಿಯಾದ ನನಗೂ ಸ್ಪರ್ಶಾಮೃತದಿಂದ ದೋಹದ ಕ್ರಿಯೆಯನ್ನು ಎಸಗಬಾರದೆ?" ಎಂದು ಮಾಲವಿಕೆಯನ್ನು ಕುರಿತು ಹೇಳಿದುದನ್ನು ಕೇಳಿ ಅವಳು ಸಹಿಸಲಾರದೆ ತಾನಿದ್ದೆಡೆಯಿಂದ ತಟ್ಟನೆ ಹೊರಬಂದು, ರೋಷಪರೀತಮಾನಸಳಾಗಿ ಮಾಲವಿಕೆಯನ್ನು ಮೂದಲಿಸಿದಳು.

ಅರಸನಿಗೆ ದಿಗ್ಭ್ರಮೆಯಾಯಿತು. ಹೇಗೆ ತಪ್ಪಿಸಿಕೊಳ್ಳುವುದೆಂದು ಅವನಿಗೆ ತೋರದಾಯಿತು. ಗೌತಮನು ಆಗ ಧೈರ್ಯವಾಗಿರುವುದೇ ಯೋಗ್ಯವೆಂದು ಮೆಲ್ಲಗೆ ಉಸುರಿದನು. ಬಕುಲಾವಲಿಕೆ ಮಾಲವಿಕೆಯರು, "ಒಡತಿ, ಕ್ಷಮಿಸಬೇಕು, ಭರ್ತನ ಪ್ರಣಯ ಪರಿಗ್ರಹಕ್ಕೆ ನಾವು ಎಷ್ಟು ಮಟ್ಟಿನವರು?" ಎಂದು ಹೇಳಿ, ಇನ್ನು ಅಲ್ಲಿರುವುದು ಸರಿಯಲ್ಲವೆಂದು ಹೊರಟುಹೋದರು. ಇರಾವತಿಯು, ಪುರುಷರು ಅವಿಶ್ವಸನೀಯರು. ಅವರನ್ನು ನಂಬಿ ತನ್ನ ಪಾಡು ಹಾಗಾಯಿತು; ಎಂದು ಅರಸನನ್ನು ಜರೆದಳು. ಗೌತಮನು ಮಧ್ಯೆ ಬಾಯಿಹಾಕಿ, ಇರಾವತಿಯು ಹಾಗೆ ಅಸೂಯೆಪಡಕೂಡದೆಂದೂ ಅವಳು ಬರಲು ಹೊತ್ತಾದುದರಿಂದ ರಾಣಿಯ ಪರಿಜನರೊಡನೆ ವಿನೋದವಾಗಿ ಮಾತನಾಡುತ್ತಿದ್ದುದಾಗಿಯೂ ಅದರಲ್ಲಿ ಯಾವ ದೋಷವೂ ಇಲ್ಲವೆಂಬುದಾಗಿಯೂ ವಾದಿಸಿದನು.

ಅರಸನು ಬಗೆಬಗೆಯಾಗಿ ಅವಳನ್ನು ಸಮಾಧಾನಪಡಿಸಲು ಪ್ರಯತ್ನಿಸಿ ವಿಫಲನಾದನು. ಇರಾವತಿಯ ರೋಷವು ಅಡಗಲಿಲ್ಲ. ಅರಸನು ಮಣಿದು ಬೇಡುತ್ತಿದ್ದರೂ ಧಿಕ್ಕರಿಸಿ, ಅವಳು ನಿಪುಣಿಕೆಯೊಡನೆ ಹೊರಟು ಹೋದಳು.

ಇರಾವತಿಯು ಹೊರಟುಹೋದಮೇಲೆ ಅರಸನ ಮನಸ್ಸು ಮತ್ತೆ ಮಾಲವಿಕೆಯ ಕಡೆ ತಿರುಗಿತು. ಉಚಿತವಾದ ಸನ್ನಿವೇಶವು ದೊರೆತೂ ತನ್ನ ಮನೋರಥದ ನಡೆಗೆ ಎಡರು ಬಂದುದಕ್ಕಾಗಿ ಮನಮರುಗಿದನು. ಮದನನ ವೈಷಮ್ಯದಿಂದ ಅವನ ಮನಸ್ಸು ಖಿನ್ನವಾಗಿಹೋಯಿತು. ಗತ್ಯಂತರವಿಲ್ಲದೆ ಅವನು ಗೌತಮನೊಡನೆ ಹೊರಟುಹೋದನು.

ಹೀಗೆ ಮುನಿದುಹೋದ ಇರಾವತಿಯು ಕಾಲುನೋವಿನಿಂದ ಬಳಲುತ್ತಿದ್ದ ಧಾರಿಣೀದೇವಿಯನ್ನು ಕಂಡು ಕುಶಲವನ್ನು ಕೇಳುವ ನೆಪದಿಂದ ಅವಳ ಬಳಿಗೈದಿ, ಉದ್ಯಾನದಲ್ಲಿ ನಡೆದ ವೃತ್ತಾಂತವೆಲ್ಲವನ್ನೂ ಅವಳಿಗೆ ತಿಳಿಸಿದಳು. ಧಾರಿಣಿಯು ಇರಾವತಿಯನ್ನು ಸಂತೋಷ ಪಡಿಸಬಯಸಿ ಅಪರಾಧಿನಿಯರಾದ ಮಾಲವಿಕೆ ಬಕುಲಾವಲಿಕೆಯರಿಬ್ಬರನ್ನೂ ಬೆಳಕು ಕಾಣದ ನೆಲಮಾಳಿಗೆಯಲ್ಲಿ ಸೆರೆಹಾಕಿ, ನಾಗ ಮುದ್ರಾಂಕಿತವಾದ ತನ್ನ ಅಂಗುಳೀಯಕವನ್ನು ಕಂಡಹೊರತು ಅವರನ್ನು ಬಿಡುಗಡೆಮಾಡಕೂಡದೆಂದು ಕಟ್ಟಪ್ಪಣೆ ಮಾಡಿ ಕಳುಹಿಸಿದಳು. ಇರಾವತಿಗೆ ಅದರಿಂದ ಸ್ವಲ್ಪಮಟ್ಟಿಗೆ ಸಮಾಧಾನವಾಯಿತು.

ಅರಸನಿಗೆ ಈ ಸುದ್ದಿ ಮುಟ್ಟುತ್ತಲೆ ಅವನ ಪರಿತಾಪಕ್ಕೆ ಪಾರವಿಲ್ಲವಾಯಿತು. ತನಗಾಗಿ ಆ ಅಬಲೆಯರು ದುಃಖಕ್ಕೀಡಾದರೆಂದು ಅವನ ಮನಸ್ಸು ತಲ್ಲಣಿಸಿಹೋಯಿತು. ಮತ್ತೆ ತನ್ನ ನರ್ಮಸಚಿವನಾದ ಗೌತಮನನ್ನು, ಆ ವಿಷಮ ಪರಿಸ್ಥಿತಿಯಲ್ಲಿ ಅಬಲೆಯರಾದ ಆ ಬಾಲೆಯರು ಬಿಡುಗಡೆಯಾಗುವ ಯಾವುದಾದರೊಂದು ಉಪಾಯವನ್ನು ಯೋಚಿಸಬೇಕೆಂದು ಕೇಳಿಕೊಂಡನು. ಗೌತಮನಿಗೆ ರಾಣಿಯ ಆಜ್ಞೆಯು ಸಂಪೂರ್ಣವಾಗಿ ತಿಳಿದಿದ್ದಿತು. ಅವನು ದೊರೆಯನ್ನು ಸಂತಯಿಸಿ, ತಾನು ಮಾಡಲಿರುವ ಕಾರ್ಯವನ್ನು ಮೊದಲೇ ಅವನಿಗೆ ತಿಳಿಸಿ, ಧಾರಿಣಿಯ ಬಳಿಗೆ ಕಳುಹಿಸಿದನು.

ಅರಸನು ಧಾರಿಣಿಯ ಅಂತಃಪುರಕ್ಕೆ ಹೋಗಿ, ಅವಳ ಯೋಗ ಕ್ಷೇಮವನ್ನು ವಿಚಾರಿಸಿ ಸಲ್ಲಪಿಸುತ್ತಿರುವಂತೆಯೇ, ಗೌತಮನು ಯಜ್ಞೋಪವೀತದಿಂದ ಬೆರಳನ್ನು ಬಿಗಿಸಿ, ಬಾಯಲ್ಲಿ ನೊರೆಬರುತ್ತಿರಲು ಕಣ್ಣೀರಿಡುತ್ತ ತನ್ನನ್ನು ಹಾವು ಕಚ್ಚಿತೆಂದೂ ಇನ್ನು ತನ್ನ ಅವಸ್ಥೆಯು ಮುಗಿಯಿತೆಂದೂ ತೊದಲಿ ನುಡಿದು ರೋದಿಸುತ್ತ ಪ್ರವೇಶಿಸಿದನು. ಹಾಗಾದುದೆಲ್ಲೆಂದು ಅರಸನು ಕೇಳಿದಾಗ ಗೌತಮನು, ಧಾರಿಣಿಯ ದರ್ಶನಕ್ಕಾಗಿ ಆಚಾರ ಪುಷ್ಪಗಳನ್ನು ಕೊಯ್ಯುತ್ತಿದ್ದಾಗ ಸರ್ಪವೊಂದು ಪೊಟರೆಯಿಂದ ಹೊರಬಂದು ತನ್ನನ್ನು ಕಡಿಯಿತೆಂದು ನಟಿಸಿದನು. ತನ್ನ ತಾಯಿಗೆ ತಾನೊಬ್ಬನೇ ಮಗನೆಂದೂ ತನ್ನ ಅನಂತರ ಆಕೆಯನ್ನು ರಕ್ಷಿಸಿಕೊಂಡು ಬರಬೇಕೆಂದೂ ಮೊರೆಯಿಟ್ಟು ಮೂರ್ಛಿತನಾದವನಂತೆ ಬಿದ್ದನು.

ತನಗಾಗಿ ಬ್ರಾಹ್ಮಣನಿಗೆ ಆ ಗತಿ ಬಂದಿತೆಂದು ಧಾರಿಣಿಯು ನೊಂದುಹೋದಳು. ಕೂಡಲೆ ಚಿಕಿತ್ಸೆ ಮಾಡಿಸಬೇಕೆಂದು ಅರಸನು ಧ್ರುವಸಿದ್ಧಿ ಎಂಬ ವಿಷವೈದ್ಯನಿಗೆ ಹೇಳಿಕಳುಹಿಸಿದನು. ಗೌತಮನ ಹಂಚಿಕೆಗೆ ಧ್ರುವಸಿದ್ಧಿಯೂ ಸೇರಿದ್ದುದರಿಂದ ತನ್ನಲ್ಲಿಗೇ ಅವನನ್ನು ಕಳುಹಿಸುವಂತೆ ಸುದ್ದಿ ಕಳುಹಿಸಿದನು. ಅರಸನು ಗೌತಮನನ್ನು ಅಲ್ಲಿಗೆ ಕಳುಹಿಸಿದಮೇಲೆ ಧ್ರುವಸಿದ್ಧಿಯು ನಾಗಮುದ್ರೆಯ ಯಾವುದಾದ ರೊಂದು ವಸ್ತುವು ಚಿಕಿತ್ಸೆಗಾಗಿ ಬೇಕೆಂದು ಜಯಸೇನೆಯೊಡನೆ ಹೇಳಿ ಕಳುಹಿಸಿದನು. ಅದನ್ನು ಕೇಳಿ ಧಾರಿಣಿಯು ನಾಗಮುದ್ರೆಯ ತನ್ನ ಅಂಗುಳೀಯಕವನ್ನೇ ತೆಗೆದುಕೊಟ್ಟು ಚಿಕಿತ್ಸೆಯಾದ ಕೂಡಲೇ ಹಿಂತಿರು ಗಿಸತಕ್ಕದ್ದೆಂದು ಅಪ್ಪಣೆಮಾಡಿದಳು.

ಸ್ವಲ್ಪ ಹೊತ್ತಾದಮೇಲೆ, ಜಯಸೇನೆಯು ನಾಗಮುದ್ರೆಯೊಡನೆ ಪ್ರವೇಶಿಸಿ, ಗೌತಮನಿಗೆ ಗುಣವಾಯಿತೆಂದು ಅರಿಕೆಮಾಡಿದಳು. ಎಲ್ಲರಿಗೂ ಸಂತೋಷವಾಯಿತು. ಹಿಡಿದ ಕಾರ್ಯವನ್ನು ಅವನು ಸಾಧಿಸಿದನೆಂದು ಅರಸನ ಆನಂದಕ್ಕಂತೂ ಎಣೆಯಿಲ್ಲವಾಯಿತು. ಯಾವುದಾದರೂ ಒಂದು ನೆಪದಿಂದ ಗೌತಮನನ್ನು ಕಾಣಲು ಹೋಗಬೇಕೆಂದು ಅವನು ಬಯಸಿದನು. ಅದೃಷ್ಟವಶದಿಂದ ಆ ಹೊತ್ತಿಗೆ ಸರಿಯಾಗಿ, ಮಂತ್ರಿಯಾದ

ವಾಹತಕನು ಆಲೋಚಿಸಬೇಕಾದ ರಾಜಕಾರ್ಯವಿರುವುದೆಂದು ಸುದ್ದಿ ಕಳುಹಿಸಿದನು. ಅರಸನಿಗೆ ಸರಿಯಾದ ಅವಕಾಶ ದೊರೆತು ಅವನು ಧಾರಿಣಿ ಯನ್ನು ಸಂತಯಿಸಿ ಅಲ್ಲಿಂದ ಹೊರಟು ಗೂಢವಾದ ಮಾರ್ಗದಿಂದ ಪ್ರಮದವನವನ್ನು ಸೇರಿದನು.

ಆ ಹೊತ್ತಿಗೆ ಗೌತಮನು ನಾಗಮುದ್ರೆಯ ಅಂಗುಳೀಯಕದ ಮೂಲಕ ಮಾಲವಿಕೆ ಬಕುಲಾವಲಿಕೆಯರನ್ನು ಸೆರೆಯಿಂದ ಬಿಡಿಸಿಕೊಂಡು ಬಂದು ಪ್ರಮದವನದಲ್ಲಿದ್ದ ಸಮುದ್ರಗೃಹದಲ್ಲಿ ಬಿಟ್ಟುಬಂದಿದ್ದನು. ಅವನು ಪ್ರಮದವನದಲ್ಲಿ ಅರಸನನ್ನು ಕಂಡೊಡನೆಯೇ ಆ ವೃತ್ತಾಂತವನ್ನು ಅವನಿಗೆ ಅರಿಕೆಮಾಡಿದನು. ಅರಸನು ಯಾವ ನೆಪವನ್ನು ಹೇಳಿ ಆ ಕನ್ನಿಕೆ ಯರನ್ನು ಬಿಡಿಸಿಕೊಂಡು ಬಂದೆಯೆಂದು ಕೇಳಲು ಗೌತಮನು, ಅರಸನ ಜನ್ಮನಕ್ಷತ್ರಕ್ಕೆ ಪಾಪಗ್ರಹವೀಕ್ಷಣೆಯಿರುವುದಾಗಿಯೂ ಅದರ ಶಾಂತಿ ಗೋಸ್ಕರ ಸೆರೆಯಲ್ಲಿರುವವರನ್ನೆಲ್ಲ ಬಿಡುಗಡೆಮಾಡಬೇಕೆಂದು ಜ್ಯೋತಿ ಷ್ಕರು ಹೇಳಿದುದರಿಂದ ಧಾರಿಣೀದೇವಿಯ ಅಪ್ಪಣೆಯಂತೆ ತಾನು ಬಂದಿರು ವುದಾಗಿಯೂ ತಿಳಿಸಿ, ನಾಗಮುದ್ರೆಯನ್ನು ತೋರಿಸಿ ಕನ್ನಿಕೆಯರನ್ನು ಬಿಡಿಸಿಕೊಂಡುಬಂದುದಾಗಿ ಹೇಳಿದನು. ಅರಸನು ಅವನ ಜಾಣ್ಮೆಗೆ ಮೆಚ್ಚಿ ಮಾಲವಿಕೆಯನ್ನು ನೋಡಲು ಸಮುದ್ರಗೃಹಕ್ಕೆ ಹೋದನು.

ಅರಸನನ್ನು ಕಂಡೊಡನೆ ಬಕುಲಾವಲಿಕೆಯು ಯಾವುದೋ ನೆಪದಿಂದ ಗೌತಮನೊಡನೆ ಹೊರಗೆ ಬಂದುಬಿಟ್ಟಳು. ಅರಸನು ಮಾಲವಿಕೆಯನ್ನು ಏಕಾಂತವಾಗಿ ಸಂಧಿಸಿದುದು ಅದೇ ಮೊದಲು. ಮನದನ್ನೆಯಾದ ಅವಳನ್ನು ಆಲಿಂಗಿಸಿಕೊಳ್ಳಹೋದನು. ಅಷ್ಟರಲ್ಲೇ, ಅರಸನಲ್ಲಿ ಕುಪಿತಳಾಗಿ ಹೊರಟುಹೋಗಿದ್ದ ಇರಾವತಿಯು ಅವನನ್ನು ಕಂಡು ಕ್ಷಮೆಯನ್ನು ಬೇಡಲವಕಾಶವಿಲ್ಲದೆ ಸಮುದ್ರಗೃಹದಲ್ಲಿರುವ ಅವನ ಪ್ರತಿಕೃತಿಗಾದರೂ ಮಣಿದು ಕ್ಷಮೆಬೇಡೋಣವೆಂದು ನಿಪುಣಿಕೆ ಯೊಡನೆ ಅಲ್ಲಿಗೆ ಬಂದಳು. ಇದೂ ಅಲ್ಲದೆ ಸರ್ಪದಷ್ಟನಾಗಿ ಚಿಕಿತ್ಸೆ ಹೊಂದಿ ಗುಣವಾಗಿದ್ದ ಗೌತಮನು ಪ್ರಮದವನದಲ್ಲಿ ಏಕಾಕಿಯಾಗಿ ಮಲಗಿರುವನೆಂಬ ಸುದ್ದಿಯನ್ನು ಕೇಳಿ ಅವನ ಯೋಗಕ್ಷೇಮವನ್ನು ವಿಚಾರಿಸುವುದೂ ಅವಳ ಉದ್ದೇಶವಾಗಿದ್ದಿತು.

ನಿಪುಣಿಕೆಯೂ ಇರಾವತಿಯೂ ಪ್ರಮದವನವನ್ನು ಪ್ರವೇಶಿಸುತ್ತಲೆ, "ಮಾಲವಿಕೆ, ಇರಾವತಿಯನ್ನು ಮೀರಿಸುವವಳಾಗು" ಎಂಬ ಮಾತು ಅವರ ಕಿವಿಗೆ ಬಿದ್ದಿತು. ಅದನ್ನು ಕೇಳಿ ನಿಪುಣಿಕೆಗೆ ಕೋಪ ಬಂದಿತು. ಹೇಳಿದವರಾರೆಂದು ಸುತ್ತಲೂ ನೋಡಿ, ಸುಖಸುಪ್ತನಾದ ಗೌತಮನನ್ನು ಕಂಡು, ಅವನೇ ಕನವರಿಸಿರಬೇಕೆಂದು ನಿಶ್ಚಯಿಸಿ, ಅವನನ್ನು ಹೆದರಿಸ ಲೋಸುಗ, ಬಳಿಯಲ್ಲಿದ್ದ ಬಳ್ಳಿಯೊಂದನ್ನು ಕಿತ್ತು ಅವನಮೇಲೆಸೆದಳು. ಅವನು ಹಾವೆಂದು ಬೆಚ್ಚಿಬಿದ್ದು, ಸರ್ಪ! ಸರ್ಪ! ಎಂದು ಕೂಗಿಕೊಂಡು, ಆಮೇಲೆ ಅದು ಬಳ್ಳಿಯಾಗಿದ್ದುದನ್ನು ನೋಡಿ, ತಾನು ಹಿಂದೆ ನಟಿಸಿದ ಸರ್ಪದಂಶನವನ್ನು ಸ್ಮರಿಸಿ ಹೀಗಾಯಿತೆಂದುಕೊಂಡನು.

ಇರಾವತಿಗೆ ಆ ಧೂರ್ತನ ಹಂಚಿಕೆಯೆಲ್ಲವೂ ಅರ್ಥವಾಯಿತು. ಆ ಹೊತ್ತಿಗೆ ಸರಿಯಾಗಿ ಸಮುದ್ರಗೃಹದಿಂದ ಅರಸನೂ ಮಾಲವಿಕೆಯೂ ಗೌತಮನ ಕೂಗನ್ನು ಕೇಳಿ ಗಾಬರಿಯಿಂದ ಹೊರಕ್ಕೆ ಬಂದರು. ಇರಾವತಿಯು ಮರೆಯಿಂದ ಮುಂದೆ ಬಂದು ಅರಸನಿಗೆ ಕಾಣಿಸಿ ಕೊಂಡಳು. ಒಡವೆಯನ್ನು ಕದಿಯುತ್ತಿದ್ದಾಗಲೇ ಸಿಕ್ಕಿಬಿದ್ದ ಕಳ್ಳನಂತಾ ಯಿತು ಅರಸನ ಪಾಡು. ಏನುಹೇಳುವುದಕ್ಕೂ ಅವನಿಗೆ ಬಾಯಿಬರಲಿಲ್ಲ. ಆದರೂ ಅವನು "ಪ್ರೇಯಸಿ, ಇವಳನ್ನು ನಾನು ಸೆರೆಯಿಂದ ಬಿಡಿಸಿದೆ. ಅದಕ್ಕಾಗಿ ಇವಳು ನನ್ನನ್ನು ಕಾಣಲು ಬಂದಿರುವಳು. ನೀನು ಬೇರೆ ವಿಧವಾಗಿ ಭಾವಿಸಬೇಡ" ಎಂದು ಸಮಾಧಾನಗೊಳಿಸಲು ಯತ್ನಿಸಿದನು. ತನ್ನ ಅದೃಷ್ಟವು ಇತರರ ಪಾಲಾಗಿಹೋಗುತ್ತಿರುವುದೆಂದೂ, ತನ್ನ ಭಾವನೆಗಳೆಲ್ಲವೂ ಬರಿದಾಗುತ್ತಿರುವುದೆಂದೂ ಹೇಳಿ ಇರಾವತಿಯು ನೊಂದಳು.

ಅರಸನು ಇಂತಹ ಇಕ್ಕಟ್ಟಿನಲ್ಲಿರುವಾಗ, ಭಾಗ್ಯವಶದಿಂದ ಮಾತು ಬೆಳೆಯುವುದಕ್ಕೆ ಅವಕಾಶವಿಲ್ಲದಂತೆ ಒಂದು ಸನ್ನಿವೇಶವೊದಗಿತು. ಅವನ ಮಗಳಾದ ವಸುಲಕ್ಷ್ಮಿಯು ಮಂಗನ ಭಯದಿಂದ ಮೂರ್ಛಿತಳಾಗಿರುವ ಳೆಂಬ ವಿಷಯವನ್ನು ಜಯಸೇನೆಯು ಅರಿಕೆಮಾಡಿದಳು. ಎಲ್ಲರಿಗೂ ದಿಗ್ಭ್ರಮೆ ಹಿಡಿಯಿತು; ಕೂಡಲೆ ವಸುಲಕ್ಷ್ಮಿಯನ್ನು ನೋಡಲು ಹೊರಟುಹೋದರು.

ಇತ್ತ ಮಾಲವಿಕೆಯು ಪ್ರಮದವನದಲ್ಲಿ ನಡೆದ ವೃತ್ತಾಂತದಿಂದ ನಡುಗಿಹೋದಳು. ಹಿಂದೆ ನಡೆದ ಒಂದು ಅಪರಾಧದಿಂದಲೇ ತಾನೂ ಬಕುಲಾವಲಿಕೆಯೂ ಕತ್ತಲುಕೋಣೆಯನ್ನು ಸೇರಬೇಕಾಯಿತು. ಈಗಂತೂ ಇರಾವತಿಯ ಸಮಕ್ಷದಲ್ಲಿ ಮಹಾಪರಾಧವೇ ನಡೆದಂತಾಗಿದೆ. ಮತ್ತಾವ ಶಿಕ್ಷೆಗೆ ತಾನು ಗುರಿಯಾಗಬೇಕಾಗುವುದೋ ಎಂದು ಕುಸುಮ ಕೋಮಲೆಯಾದ ಅವಳ ಮೃದು ಹೃದಯವು ತತ್ತಳಿಸಿಹೋಯಿತು. ಬಕುಲಾವಲಿಕೆಯು ಸಖಿಯನ್ನು ಸಮಾಧಾನಪಡಿಸುವ ಸ್ಥಿತಿಯಲ್ಲಿರಲಿಲ್ಲ. ಅವಳೂ ಅಂಜಿ ಸ್ತಬ್ಧಳಾಗಿಬಿಟ್ಟಿದ್ದಳು. ಅವರಿಬ್ಬರ ಅದೃಷ್ಟವಿಶೇಷ ವೆಂಬಂತೆ ಆ ಸಮಯಕ್ಕೆ ಸರಿಯಾಗಿ ಒಂದು ಶುಭವಾರ್ತೆಯು ಅವರಿಗೆ ತಿಳಿಯಿತು. ದೋಹದ ಕ್ರಿಯೆಯನ್ನು ಅನುಭವಿಸಿದ ಅಶೋಕವೃಕ್ಷವು ಐದು ದಿನಗಳಾಗುವುದಕ್ಕೆ ಮುಂಚೆಯೇ ಮೊಗ್ಗೊಡೆದು ಕಳಕಳಿಸುತ್ತಿರು ವುದೇ ಆ ವಾರ್ತೆಯಾಗಿತ್ತು. ಬಕುಲಾವಲಿಕೆಯು, "ಗೆಳತಿ, ಸಮಾಧಾನ ತಂದುಕೊ, ಮಹಾರಾಣಿಯ ವಾಗ್ದಾನವು ವ್ಯರ್ಥವಾಗುವುದಿಲ್ಲ. ನಿನ್ನ ಮನೋರಥವನ್ನು ಆಕೆಯು ಈಡೇರಿಸುತ್ತಾಳೆ" ಎಂದು ಹೇಳಿದಳು. ಮಾಲವಿಕೆಗೆ ಸ್ವಲ್ಪಮಟ್ಟಿಗೆ ಸಂತೋಷವಂಕುರಿಸಿತು. ಇಬ್ಬರೂ ಅಶೋಕವೃಕ್ಷದ ಸೊಬಗನ್ನು ನೋಡಲು ಹೊರಟರು.

ಅತ್ತ ಅಂತಃಪುರದಲ್ಲಿ ವಸುಲಕ್ಷ್ಮಿಯನ್ನು ಸಂತಯಿಸುವುದರಲ್ಲಿಯೆ ದಿನವೆಲ್ಲ ಕಳೆದುಹೋದುದರಿಂದ ಪ್ರಮದವನದಲ್ಲಿ ನಡೆದ ವೃತ್ತಾಂತ ವನ್ನು ಇರಾವತಿಯು ಎತ್ತಲಾಗಲಿಲ್ಲ. ಮಾರನೆಯ ದಿನ ಅಶೋಕ ವೃಕ್ಷವು ಕುಸುಮಿಸಿರುವ ಸುದ್ದಿಯು ಮಹಾರಾಣಿ ಧಾರಿಣಿಗೆ ತಿಳಿಯಿತು. ಅವಳು ತನ್ನ ವಾಗ್ದಾನದಂತೆ ಮಾಲವಿಕೆಯ ಇಷ್ಟಾರ್ಥವನ್ನು ಈಡೇರಿಸುವ ವಿಷಯವನ್ನು ಯೋಚಿಸಿದಳು.

ಅಗ್ನಿಮಿತ್ರನು ಮಾಲವಿಕೆಯಲ್ಲಿ ಅನುರಕ್ತನಾಗಿ ಅಂತಃಪುರದವರಲ್ಲಿ ಪರಾಙ್ಮುಖನಾಗಿರುವುದು, ದಿನದಿನವೂ ವಿರಹತಾಪದಿಂದ ಕಂದಿಹೋಗು ತ್ತಿರುವುದು, ಮಾಲವಿಕೆಯೂ ವಲ್ಲಭನಾದ ಅವನಿಗಾಗಿ ತನ್ನ ಹೃದಯ ವನ್ನೇ ಧಾರೆಯೆರೆದು ಚಿರತಪಸ್ವಿನಿಯಾಗಿರುವುದು, ಈ ಸಂದರ್ಭದಲ್ಲಿ ಪರಸ್ಪರಾನುರಕ್ತರಾದ ಅವರಿಬ್ಬರ ಅನುಬಂಧವನ್ನು ತಪ್ಪಿಸಿದರೆ

ಪ್ರಮಾದವಾಗುವುದು—ಈ ಎಲ್ಲ ಯೋಚನೆಗಳೂ ಅವಳ ಮನಸ್ಸಿನಲ್ಲಿ ಸುಳಿದಾಡಿ, ಕಡೆಗೆ ಅಗ್ನಿಮಿತ್ರನಿಗೆ ಮಾಲವಿಕೆಯನ್ನು ವಿವಾಹ ಮಾಡಿಕೊಳ್ಳುವುದೇ ಶ್ರೇಯಸ್ಕರವೆಂದು ನಿರ್ಧರಿಸಿಬಿಟ್ಟಳು.

ಧಾರಿಣಿಯು ಹೀಗೆ ನಿರ್ಧರಿಸಿ ಅದನ್ನು ಯಾರಲ್ಲಿಯೂ ಬಹಿರಂಗ ಪಡಿಸದೆ, ಪಂಡಿತಕೌಶಿಕಿಯನ್ನು ಬರಮಾಡಿಕೊಂಡು, ಪ್ರಮದವನದಲ್ಲಿ ಪುಷ್ಪಿಸಿರುವ ಅಶೋಕ ವೃಕ್ಷವನ್ನು ನೋಡಿ ನಯನೋತ್ಸವವನ್ನು ಹೊಂದಬಯಸಿರುವುದಾಗಿಯೂ, ಅದಕ್ಕಾಗಿ ತನ್ನ ಪರಿವಾರವೆಲ್ಲವೂ ತನ್ನೊಡನೆ ಬರಬೇಕೆಂಬುದಾಗಿಯೂ ತಿಳಿಸಿದುದಲ್ಲದೆ, ಅಲಂಕಾರ ಚತುರೆಯಾದ ಅವಳು ಮಾಲವಿಕೆಗೆ ವಧೂಯೋಗ್ಯವಾದ ಅಲಂಕಾರ ವನ್ನು ಮಾಡಿ ಕರೆತರಬೇಕೆಂದು ಬೆಸಸಿದಳು. ಕೌಶಿಕಿಗೆ ಧಾರಿಣಿಯ ಮನೋಗತದ ಅರಿವಾಯಿತು. ಅವಳ ಪ್ರಮೋದವೇ ಪ್ರಮೋದ. ಯಾವ ಕಾರ್ಯಸಿದ್ಧಿಗಾಗಿ ತನ್ನ ಸಹೋದರನಾದ ಸುಮತಿಯು ಅಸುವನ್ನು ನೀಗಿದನೋ, ಯಾವ ಕಾರ್ಯಸಿದ್ಧಿಗಾಗಿ ಪ್ರಭುವಾದ ಮಾಧವಸೇನನು ಸೆರೆಗೊಳಗಾದನೋ ಆ ಮಹತ್ಕಾರ್ಯವು ಇಂದು ಕೈಗೂಡುವುದೆಂಬುದಾಗಿ ಅವಳ ಮನಸ್ಸು ಹಿಗ್ಗಿಹೋಯಿತು.

ಪ್ರಮದವನಕ್ಕೆ ಹೋಗುವ ಮುಂಚೆ ಸೇನಾಧಿಪತಿಯಾದ ವೀರಸೇನನು ಯಜ್ಞಸೇನನೊಡನೆ ಹೋರಾಡಿ ವಿಜಯಿಯಾಗಿ, ಮಾಧವ ಸೇನನನ್ನು ಸೆರೆಯಿಂದ ಬಿಡಿಸಿ, ಅವನ ಕಡೆಯಿಂದ ಮಹಾರ್ಘಗಳಾದ ರತ್ನಗಳನ್ನೂ, ವಾಹನಗಳನ್ನೂ, ಶಿಲ್ಪಚತುರರಾದ ಪರಿಜನರನ್ನೂ ಕಾಣಿಕೆ ಯಾಗಿ ಕೊಂಡುಬಂದಿದ್ದ ಸುದ್ದಿಯು ವೀರಸೇನನೇ ಕಳುಹಿಸಿದ್ದ ಪತ್ರದ ಮೂಲಕ ಧಾರಿಣೀದೇವಿಗೆ ತಿಳಿಯಿತು. ತನ್ನ ಅಣ್ಣನು ಮೆರೆದ ಪರಾಕ್ರಮದಿಂದ ಅವಳ ಮನಸ್ಸು ಹರ್ಷಮಗ್ನವಾಗಿದ್ದಿತು. ಅವಳು ಪರಿಜನರೊಡನೆ ಸಂಭ್ರಮದಿಂದ ಪ್ರಮದವನವನ್ನು ಪ್ರವೇಶಿಸಿದಳು.

ಅಗ್ನಿಮಿತ್ರನು ಗೌತಮನೊಡನೆ ಮೊದಲೇ ಪ್ರಮದವನಕ್ಕೆ ಬಂದಿದ್ದನು. ಒಂದುಕಡೆ ವೀರಸೇನನ ಜೈತ್ರಯಾತ್ರೆಯ ಸಂತೋಷ; ಮತ್ತೊಂದು ಕಡೆ ಮಾಲವಿಕೆಯ ಹೀನದೀನಾವಸ್ಥೆ—ಎರಡೂ ಸೇರಿ ಅರಸನ ಮನಸ್ಸು ಸಂತೋಷ ದುಃಖಗಳೆರಡನ್ನೂ ಸಮವಾಗಿ ಅನುಭವಿಸು

ತ್ತಿದ್ದಿತು. ಗೌತಮುನಿಗೆ ಮಹಾರಾಣಿ ಧಾರಿಣಿಯು ಪಂಡಿತಕೌಶಿಕಿಗೆ ಆಜ್ಞಾಪಿಸಿದ್ದ ಪರಿಯೆಲ್ಲವೂ ಗೊತ್ತಿದ್ದುದರಿಂದ ಅವನು, "ಮಿತ್ರ, ನೀನು ಏಕಾಂತ ಸುಖಿಯಾಗುವೆ, ಮಹಾರಾಜ್ಞಿಯು ಸರ್ವವಿಧದಿಂದಲೂ ನಿನ್ನ ವಿಷಯದಲ್ಲಿ ಪ್ರಸನ್ನಳಾಗಿ ನಿನ್ನ ಮನೋರಥವನ್ನು ಈಡೇರಿಸುವಳು" ಎಂದು ಸಂತಯಿಸಿದನು. ಅಷ್ಟರಲ್ಲಿ ಪ್ರತೀಹಾರಿಯು ಅವರ ಬಳಿಗೆ ಬಂದು, ಅಶೋಕವೃಕ್ಷದ ಕುಸುಮಸಮೃದ್ಧಿಯನ್ನು ತನ್ನೊಡನೆ ನೋಡಬಯಸುವ ಧಾರಿಣಿಯ ಮನೋರಥವನ್ನು ಅರಿಕೆಮಾಡಿದನು. ಗೌತಮನೆಂದ ಮಾತಿಗೆ ಅದು ನಿದರ್ಶನವಾಗಿ ಪರಿಣಮಿಸಿತು. ಅರಸನು ಮಹೋತ್ಸಾಹಪೂರಿತನಾಗಿ ಅಶೋಕ ವೃಕ್ಷದ ಬಳಿಗೆ ಹೋದನು.

ಅಶೋಕವೃಕ್ಷದ ಬಳಿ ಧಾರಿಣೀದೇವಿ, ಪಂಡಿತಕೌಶಿಕಿ, ಮಾಲವಿಕೆ ಮತ್ತು ಪರಿಜನರು ಎಲ್ಲರೂ ಸೇರಿದ್ದರು. ಅರಸನು ಅಲ್ಲಿಗೆ ಬಂದು ಮಾಲವಿಕೆಯನ್ನು ಕಂಡು ಮುಗ್ಧನಾಗಿಹೋದನು. ವಿವಾಹನೇಪಥ್ಯದಿಂದ ಅವಳು ವಿಶೇಷವಾಗಿ ಶೋಭಿಸುತ್ತಿದ್ದಳು. ನಸು ಜಾರಿದ ದುಕೂಲವನ್ನುಟ್ಟು, ಅನೇಕ ಆಭರಣಗಳನ್ನು ತೊಟ್ಟು, ಮೆರೆಯುತ್ತಿದ್ದ ಅವಳು ತಾರಗೆಗಳೊಡನೆ ಉದಿಸುತ್ತಿರುವ ಚಂದ್ರಕಾಂತಿಸಹಿತವಾದ ಹಿಮುವುಡುಗಿದ ಚೈತ್ರವಿಭಾವರಿಯಂತೆ ಕಂಗೊಳಿಸುತ್ತಿದ್ದಳು. ಅರಸನು ಅವಳನ್ನು ನೋಡುತ್ತ ನೋಡುತ್ತ ತನ್ನ ಮನೋರಥವು ಈಡೇರುವುದೆಂದು ನಿಶ್ಚಯಿಸಿಕೊಂಡನು.

ಧಾರಿಣಿಯು ರಾಜನನ್ನು ಸ್ಮಿತವದನೆಯಾಗಿ ಎದುರುಗೊಂಡು ಹೊಸದಾಗಿ ಕುಸುಮಿಸಿರುವ ರಕ್ತಾಶೋಕವು ಅವನಿಗೆ ಸಂಕೇತ ವಿನೋದಮಂಟಪವಾಗಿ ಉಪಯೋಗವಾಗಲೆಂದು ಬಯಸಿದಳು. ಅರಸನು ಆ ಮಾತನ್ನು ಕೇಳಿ ಆನಂದಿಸುತ್ತಿರಲು, ಕಂಚುಕಿಯು ವಿದರ್ಭದೇಶದಿಂದ ಉಪಾಯನವಾಗಿ ಬಂದಿರುವ ಇಬ್ಬರು ಶಿಲ್ಪಕಾರಿಕೆಯರು ಅರಸನನ್ನು ನೋಡಬಯಸುವುದಾಗಿ ಸುದ್ದಿ ತಂದನು. ಒಡನೆಯೇ ಅವರನ್ನು ಪ್ರವೇಶಗೊಳಿಸಬೇಕೆಂದು ಅರಸನ ಅಪ್ಪಣೆಯಾಯಿತು. ಅದರಂತೆ, ಅವರಿಬ್ಬರೂ ಪ್ರವೇಶಿಸಿದರು.

ಮೊದಲು ಆ ಶಿಲ್ಪಕಾರಿಕೆಯರಿಬ್ಬರೂ ಮಾಧವಸೇನನ ಅರಮನೆ

ಯಲ್ಲಿ ಮಾಲವಿಕೆಯ ಪರಿಚಾರಿಕೆಯರಾಗಿದ್ದವರು. ಅವರು ಪ್ರವೇಶಿಸು ತ್ತಲೆ ಮಾಲವಿಕೆಗೂ ಪಂಡಿತಕೌಶಿಕಿಗೂ ಅವರ ಗುರುತು ಸಿಕ್ಕಿತು. ಅಂತೆಯೇ, ಆ ಶಿಲ್ಪಕಾರಿಕೆಯರೂ ತಮ್ಮ ಒಡತಿಯಾದ ಮಾಲವಿಕೆ ಯನ್ನೂ ಕೌಶಿಕಿಯನ್ನೂ ಗುರುತಿಸಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿ ದರು. ಎಲ್ಲರಿಗೂ ಆಶ್ಚರ್ಯವಾಯಿತು. ಮಾಲವಿಕೆಯು ಮಾಧವಸೇನನ ತಂಗಿಯೆಂಬ ವಿಚಾರವೂ ಅವಳನ್ನು ವಿದಿಶೆಗೆ ಕರೆತರುವಾಗ ದಾರಿಯಲ್ಲಿ ನಡೆದ ದರೋಡೆಕಾರರ ದಾಂಧಳೆಯ ಪರಿಣಾಮವಾಗಿ ಅವಳು ವೀರಸೇನನ ರಕ್ಷಣೆಗೆ ಸಿಕ್ಕಿ ಆಮೇಲೆ ಧಾರಿಣಿಯ ಪೋಷಣೆಗೆ ಒಳಗಾದ ವಿಚಾರವೂ ಗೊತ್ತಾಯಿತು. ಪಂಡಿತಕೌಶಿಕಿಯು ತನ್ನ ಸೋದರ ನಾದ ಸುಮತಿಯ ಮರಣವೃತ್ತಾಂತವನ್ನೂ ಆಮೇಲೆ ತಾನು ವಿರಕ್ತೆ ಯಾಗಿ ಕಾಷಾಯವನ್ನು ಧರಿಸಿ ಧಾರಿಣಿಯ ಆಶ್ರಯವನ್ನು ಪಡೆದುದನ್ನೂ ತಿಳಿಸಿದಳು.

ಧಾರಿಣಿಯು ಸತ್ಕುಲಪ್ರಸೂತೆಯಾದ ಮಾಲವಿಕೆಯನ್ನು ದಾಸೀ ಭಾವದಿಂದ ಕಂಡುದಕ್ಕಾಗಿ ಪರಿತಪಿಸಿದಳು. ಮಾಲವಿಕೆಯ ವಿಚಾರ ವನ್ನು ತಿಳಿದೂ ತನಗೆ ತಿಳಿಸದಿದ್ದುದಕ್ಕಾಗಿ ಪಂಡಿತಕೌಶಿಕಿಯನ್ನು ಅವಳು ಆಕ್ಷೇಪಿಸಿದಳು. ಕೌಶಿಕಿಯು ಸಿದ್ಧಪುರುಷರು ಮಾಲವಿಕೆಯ ವಿಚಾರದಲ್ಲಿ ನುಡಿದಿದ್ದ ಭವಿಷ್ಯವನ್ನೆಲ್ಲ ಮನವಿಮಾಡಿ, ತಾನು ಮರೆ ಮಾಚಿದ್ದುದು ಒಳ್ಳಿತಾಯಿತೆಂದು ಹೇಳಿ ಸಮಾಧಾನಗೊಳಿಸಿದಳು.

ಆ ಸಂತೋಷ ಸಂಭ್ರಮದಲ್ಲಿ ಅಗ್ನಿಮಿತ್ರನು ವಿದರ್ಭದೇಶವನ್ನು ಮಾಧವಸೇನನಿಗೂ ಯಜ್ಞಸೇನನಿಗೂ ಸಮ ಸಮವಾಗಿ ಹಂಚಿಕೊಡುವ ಔದಾರ್ಯವನ್ನು ಮೆರೆದನು. ಅದೇ ಸಮಯದಲ್ಲಿಯೇ ಮತ್ತೊಂದು ಸಂತೋಷವಾರ್ತೆಯು ಅವನಿಗೆ ತಿಳಿಯಿತು. ತನ್ನ ತಂದೆಯಾದ ಪುಷ್ಪ ಮಿತ್ರನು ಆಶೀರ್ವಾದ ಪುರಸ್ಸರವಾದ ಅಶ್ವಮೇಧಾಹ್ವಾನಪತ್ರಿಕೆಯನ್ನು ಕಳುಹಿಸಿ ಅದರಲ್ಲಿ ತನ್ನ ಮೊಮ್ಮಗನಾದ ವಸುಮಿತ್ರನ ಜೈತ್ರಯಾತ್ರೆ ಯನ್ನು ಪ್ರಶಂಸಿಸಿದ್ದನು. ರಾಜಕುಟುಂಬದವರೆಲ್ಲರಿಗೂ ಆನಂದ ವಾಯಿತು. ಅಗ್ನಿಮಿತ್ರನಿಗೆ ತನ್ನ ಪುತ್ರನ ಪರಾಕ್ರಮವು ಹೆಮ್ಮೆ ಯನ್ನುಂಟುಮಾಡಿತು. ಧಾರಿಣಿಯ ಆನಂದಕ್ಕೂ ಎಣೆಯಿಲ್ಲವಾಯಿತು.

ಅವಳು ಈ ಎಲ್ಲ ವೃತ್ತಾಂತವನ್ನೂ ಇರಾವತಿಗೆ ತಿಳಿಸಿ ಅವಳ ಸಮ್ಮತಿಯನ್ನೂ ಪಡೆದು ಮೊದಲೇ ವಿವಾಹ ನೇಪಥ್ಯದಿಂದ ಶೋಭಿಸುತ್ತಿರುವ ಮಾಲವಿಕೆಯನ್ನು ತನ್ನ ಭರ್ತನಾದ ಅಗ್ನಿಮಿತ್ರನಿಗೆ ಮದುವೆಮಾಡಿ ಕೊಟ್ಟಳು. ಹೀಗೆ ಪ್ರಣಯಿಗಳಾದ ಅಗ್ನಿಮಿತ್ರ ಮಾಲವಿಕೆಯರ ವಿವಾಹಮಹೋತ್ಸವವು ಸುಖಮಯವಾಗಿ ಬೆಳೆದು, ಅವರನ್ನು ಆನಂದಮಯರನ್ನಾಗಿ ಮಾಡಿತು.

ಆಶಾಸ್ಯಭೀತಿ ವಿಗಮ ಪ್ರಭೃತಿ ಪ್ರಜಾನಾಂ ।<br>
ಸಂಪತ್ಸ್ಯತೇ ನ ಖಲು ಗೋಪ್ತರಿ ನಾಗ್ನಿಮಿತ್ರೇ ॥

---

# ನಾಗಾನಂದ

ವಿದ್ಯಾಧರ ಚಕ್ರವರ್ತಿಯಾದ ಜೀಮೂತಕೇತುವಿಗೆ ಜೀಮೂತವಾಹನನೆಂಬ ಒಬ್ಬ ಮಗನಿದ್ದನು. ತರುಣನೂ ಸುಂದರನೂ ದಾನವೀರನೂ ದಯಾಶೀಲನೂ ಆದ ಅವನು ವಿದ್ಯಾಧರರೆಲ್ಲರ ಪ್ರೀತಿಗೌರವಗಳಿಗೆ ಪಾತ್ರನಾಗಿದ್ದನು. ಬಹುಕಾಲ ಚಕ್ರಾಧಿಪತ್ಯವನ್ನಾಳಿ ಜೀಮೂತಕೇತುವು ತನ್ನ ಮಗನಿಗೆ ಪಟ್ಟಕಟ್ಟಿ ವಾನಪ್ರಸ್ಥಾಶ್ರಮಿಯಾಗಿ ತಪೋವನವನ್ನು ಸೇರಿದನು. ನೂತನ ಚಕ್ರವರ್ತಿಯಾದ ಜೀಮೂತವಾಹನನು, ತನ್ನ ಸದ್ಗುಣಗಳ ಪ್ರಭಾವದಿಂದಲೂ ಅನುಪಮವಾದ ತನ್ನ ಪರಾಕ್ರಮದ ಮೇಲ್ಮೆಯಿಂದಲೂ ಚಕ್ರಾಧಿಪತ್ಯದ ಸಮಸ್ತ ಪ್ರಜೆಗಳ ಭಕ್ತಿಗೌರವಗಳನ್ನು ಸಂಪಾದಿಸಿ, ಸುಪ್ರಸಿದ್ಧನಾಗಬಹುದಾಗಿದ್ದಿತು. ಆದರೆ ಅವನಿಗೆ ಆಳುವುದಕ್ಕಿಂತಲೂ ಮಾತಾಪಿತೃಗಳ ಶುಶ್ರೂಷೆ ಮಾಡುವುದರಲ್ಲಿ ಒಲವು ಹೆಚ್ಚಿ, ಆಡಳಿತದ ಭಾರವೆಲ್ಲವನ್ನೂ ಮಂತ್ರಿಗಳಿಗೊಪ್ಪಿಸಿ ತನ್ನ ತಾಯಿತಂದೆಗಳಿದ್ದ ತಪೋವನಕ್ಕೆ ಬಂದನು.

ತಂದೆಯಂತೆಯೇ ಜೀಮೂತವಾಹನನೂ ವಿದ್ಯಾಧರ ಚಕ್ರವರ್ತಿಯಾಗುವ ಸಮಸ್ತ ಲಕ್ಷಣಗಳನ್ನೂ ಹೊಂದಿದ್ದನು. ಸಮಸ್ತ ಪ್ರಜೆಗಳೂ ಅವನಲ್ಲಿ ನಿರತಿಶಯವಾದ ಪ್ರೇಮವನ್ನಿಟ್ಟುಕೊಂಡಿದ್ದರು. ಮೇಲಾಗಿ, ಅವನು ಅಜಾತಶತ್ರುವೆನಿಸಿದ್ದನು. ಇಂತಹವನು ವೃದ್ಧರಾದ ತಾಯಿತಂದೆಗಳ ಪರಿಚರ್ಯೆಗಾಗಿ ತಪೋವನಕ್ಕೆ ಬರುವುದು ಅವನ ಮಿತ್ರನಾದ ಆತ್ರೇಯನಿಗೆ ಪ್ರಿಯವಾಗಲಿಲ್ಲ. ನಿರ್ವಿಣ್ಣನಾಗಿ, ಜೀವನ್ಮೃತರಂತಿದ್ದ ತಾಯಿತಂದೆಗಳಿಗೋಸ್ಕರ ವನವಾಸದುಃಖವನ್ನು ಅವನು ಅನುಭವಿಸುವುದು ತೀರಾ ಅನುಚಿತವೆಂದು ಆತ್ರೇಯನು ಆಕ್ಷೇಪಿಸಿದನು. ಆದರೆ ಜೀಮೂತವಾಹನನು ಪೂಜ್ಯನಾದ ತಂದೆಯ ಚರಣಶುಶ್ರೂಷೆಯ ಮುಂದೆ ಸಿಂಹಾಸನಪ್ರಾಪ್ತಿಯೂ ಗಣ್ಯವಾದುದಲ್ಲವೆಂದು ಹೇಳಿ ಅವನನ್ನು ಸಮಾಧಾನಗೊಳಿಸಿದನು. ಮೂರು ಲೋಕಗಳ ಆಧಿಪತ್ಯವನ್ನು ನಡೆಯಿಸಿ, ಭೋಗಭಾಗ್ಯಗಳನ್ನನುಭವಿಸಿದರೂ ಅದು ಮಾತಾಪಿತೃ

ಶುಶ್ರೂಷೆಯಿಂದಾಗುವ ಸುಖದಲ್ಲಿ ಲವಲೇಶಕ್ಕೂ ಸರಿತೂಗಲಾರದು ಎಂದು ಅವನೆಣಿಕೆ.

ಆತ್ರೇಯನು ಅವನ ನಿರ್ವೇದವನ್ನು ಕಂಡು ವಿಸ್ಮಿತನಾಗಿ ಅವನ ಮಾತಾಪಿತೃಭಕ್ತಿಗೆ ತನ್ನಲ್ಲಿಯೇ ಮೆಚ್ಚಿಕೊಂಡನಾದರೂ, ಹೇಗಾದರೂ ಅವನನ್ನು ರಾಜ್ಯಸುಖದ ಕಡೆಗೆ ತಿರುಗಿಸಬೇಕೆಂದು ಸಂಕಲ್ಪಿಸಿದನು. ಮಹಾ ಸಾಹಸಿಯಾದ ಮತಂಗನೆಂಬ ಧೂರ್ತ ವಿದ್ಯಾಧರನೊಬ್ಬನು ಅವನ ರಾಜ್ಯವನ್ನು ಅಪಹರಿಸುವುದರಲ್ಲಿರುವನೆಂದೂ, ಅದಕ್ಕೆ ಅವಕಾಶಕೊಡ ಕೂಡದೆಂದೂ ವಾದಿಸಿದನು. ಆದರೆ ಈ ವಾದವು ಜೀಮೂತವಾಹನನ ದೃಢ ಮನಸ್ಸನ್ನು ಕದಲಿಸಲಿಲ್ಲ. ಅವನು ತನ್ನ ಶರೀರ ಮೊದಲು ಗೊಂಡು ಸರ್ವಸ್ವವನ್ನೂ ಪರಾರ್ಥಕ್ಕಾಗಿ ವಿನಿಯೋಗಿಸಲು ಸಿದ್ಧನಾಗಿದ್ದ ಮಹಾ ದಾನವೀರನು. ಮತಂಗನು ತನ್ನ ರಾಜ್ಯವನ್ನು ಒಂದುವೇಳೆ ಅಪಹರಿಸಿದರೂ ನಿರಾತಂಕವಾಗಿ ಅವನೇ ಅದನ್ನನುಭವಿಸಿಕೊಳ್ಳಲೆಂದು ಅವನ ಮನಸ್ಸು. ತಂದೆಗೆ ಆತನ ಅಪ್ಪಣೆಯಂತೆ ಮಲಯಪರ್ವತದಲ್ಲಿ ವಾಸಯೋಗ್ಯವಾದ ಆಶ್ರಮವನ್ನು ರಚಿಸಲು ಉಚಿತವಾದ ಸ್ಥಳವನ್ನು ಗೊತ್ತುಮಾಡುವುದೊಂದೆ ಆಗ್ಗೆ ಅವನ ಮನಸ್ಸಿನಲ್ಲಿದ್ದ ಆಸೆ.

ಜೀಮೂತವಾಹನನೂ ಆತ್ರೇಯನೂ ಮಲಯ ಪರ್ವತದ ಉಪವನಗಳ ರಾಮಣೀಯಕವನ್ನು ನೋಡಿ ಆನಂದಿಸುತ್ತ ಸಂಚರಿಸುತ್ತಿದ್ದರು. ಇದ್ದಕ್ಕಿದ್ದಂತೆಯೆ ಜೀಮೂತವಾಹನನ ಬಲಗಣ್ಣು ಅದುರಿ ಶುಭ ಸೂಚನೆಯಾಯಿತು. ಯಾವ ಫಲಾಕಾಂಕ್ಷೆಯೂ ಇಲ್ಲದ ತನಗೆ ಹಾಗಾದುದನ್ನು ತಿಳಿದು ಅವನು ವಿಸ್ಮಿತನಾದನು. ಆದರೂ ಶುಭ ಫಲವು ದೊರಕುತ್ತದೆಯೆಂದೂ, ಮುನಿಗಳು ಆ ಶಕುನಕ್ಕೆ ಪ್ರಯೋಜನವನ್ನು ಹೇಳಿರುವುದು ಸುಳ್ಳಾಗದೆಂದೂ ಅವನು ಯೋಚಿಸಿದನು.

ಅಷ್ಟರಲ್ಲಿಯೇ ತಂತ್ರೀವಾದ್ಯದ ಇಂಪಾದ ಧ್ವನಿಯು ಕೇಳ ಬಂದಿತು. ಅಲ್ಲಲ್ಲಿದ್ದ ತಪೋವನಗಳ ಕುರಂಗಗಳೆಲ್ಲವೂ ದರ್ಭಕವಳಗಳನ್ನುಳಿದು, ನಿಶ್ಚಲಗಳಾಗಿ, ನಿಮೀಲಿತ ಲೋಚನಗಳಾಗಿ, ಕಿವಿಗೊಟ್ಟು ಆ ಮಧುರ ಧ್ವನಿಯನ್ನು ಆಲಿಸುತ್ತಿದ್ದುವು. ತಪೋವನದಲ್ಲಿ ಶ್ರುತಿಬದ್ಧವಾಗಿ, ಮನೋಹರವಾಗಿ ಹಾಡುತ್ತಿರುವವರಾರೆಂದು ಆತ್ರೇಯನಿಗೆ

ತೋರಲಿಲ್ಲ. ನಯವಾಗಿ, ಹದವಾಗಿ ತಂತಿಗಳನ್ನು ಮಿಾಟುತ್ತ ಮಧುರ ವಾಗಿ ಹಾಡುತ್ತಿರುವ ವ್ಯಕ್ತಿಯು ಸಮಿಾಪದಲ್ಲಿಯೆ ಕಾಣುತ್ತಿದ್ದ ದೇವಾಲಯದಲ್ಲಿ ದೇವತಾರಾಧನಪರಳಾದ ಯಾವಳೋ ಒಬ್ಬ ದಿವ್ಯಾಂಗನೆ ಯಾಗಿರಬೇಕೆಂದು ಜೀಮೂತವಾಹನನು ಊಹಿಸಿದನು.

ಆಗ ತಾವೂ ದೇವಾಲಯವನ್ನು ನೋಡಿಕೊಂಡು ಬರಬಹುದೆಂದು ಆತ್ರೇಯನು ಸೂಚಿಸಿದನು. ಜೀಮೂತವಾಹನನು, ದೇವತೆಗಳು ವಂದನೀಯರೆಂದು ಹೇಳಿ, ಆತ್ರೇಯನೊಡನೆ ದೇವಾಯತನದ ಬಳಿಸಾರಿ, ಸ್ತ್ರೀ ಜನರನ್ನು ನೋಡುವುದು ಒಂದು ವೇಳೆ ಯೋಗ್ಯವಾಗದೆ ಹೋಗ ಬಹುದು ಎಂದು ಯೋಚಿಸಿ, ಸಮಯವನ್ನು ನಿರೀಕ್ಷಿಸುತ್ತ ಅಲ್ಲಿಯ ತಮಾಲವೃಕ್ಷಗಳ ಮರೆಯಲ್ಲಿಯೇ ಆತ್ರೇಯನೊಡನೆ ಕೆಲಕಾಲ ನಿಂತನು.

ದೇವಾಯತನದಲ್ಲಿ ಎಂದಿನಂತೆ ಪೂಜೆಯನ್ನು ಸಲ್ಲಿಸುವುದಕ್ಕಾಗಿ ಬಿಜಮಾಡಿದ್ದ ಮಲಯವತಿಯೆಂಬ ವಿದ್ಯಾಧರ ರಾಜಕನ್ಯೆಯು, "ಉತ್ಫುಲ್ಲವಾದ ಕಮಲಕೇಸರದ ಪರಾಗದಂತೆ ಗೌರಕಾಂತಿಯುಳ್ಳ ಗೌರಿಯೇ! ನಿನ್ನ ಪ್ರಸಾದದಿಂದ ನನ್ನ ವಾಂಛಿತವು ಪೂರ್ಣವಾಗಲಿ" ಎಂಬ ಅಭಿಪ್ರಾಯವುಳ್ಳ ಗೀತವನ್ನು ವೀಣಾವಾದನದೊಡನೆ ಹಾಡು ತ್ತಿದ್ದಳು. ಜೀಮೂತವಾಹನನು ಮಧುರವಾದ ಆ ಹಾಡಿಗೂ, ಸೊಗಸಾದ ವೀಣಾವಾದನಕ್ಕೂ ಬೆರಗಾದನು.

ಆ ಹೊತ್ತಿಗೆ ಮಲಯವತಿಯ ಚೇಟಿಯು, ಕನ್ನಿಕೆಯರು ದುಷ್ಕರ ವಾದ ನಿಯಮೋಪಾಸನೆಗಳಿಂದ ಆರಾಧಿಸಿದರೂ ದಯೆ ತೋರಿ ಇನ್ನೂ ಪ್ರಸನ್ನಳಾಗದಿರುವ ಈ ದೇವಿಯ ಮುಂದೆ ಅಷ್ಟುಕಾಲ ಭಕ್ತಿನಮ್ರ ಯಾಗಿ ವೀಣೆಯನ್ನು ನುಡಿಸಿದುದರಿಂದ ಫಲವೇನೆಂದು ಮಲಯವತಿಗೆ ಹೇಳಿದ ಮಾತು ಜೀಮೂತವಾಹನನ ಮತ್ತು ಅವನ ಗೆಳೆಯನ ಕಿವಿಗಳಿಗೆ ಬಿದ್ದಿತು. ಆತ್ರೇಯನು, "ಕನ್ನಿಕೆಯಾದುದರಿಂದ ಇವಳನ್ನು ನೋಡ ಬಹುದು; ಆಯತನವನ್ನು ಪ್ರವೇಶಿಸೋಣ" ಎಂದನು. ಜೀಮೂತ ವಾಹನನು, "ನೋಡುವುದರಲ್ಲಿ ದೋಷವೇನೂ ಇಲ್ಲ. ಒಂದು ವೇಳೆ ಬಾಲ್ಯಸಹಜವಾದ ಲಜ್ಜೆಯಿಂದಲೋ ತಳಮುಳದಿಂದಲೋ ಇವಳು

ಬಹಳ ಹೊತ್ತು ಇಲ್ಲಿ ನಿಲ್ಲಲಾರಳು. ಆದುದರಿಂದ ಈ ಹೊಂಗೆಯ ಮರೆಯಿಂದಲೇ ನೋಡೋಣ'' ಎಂದನು.

ನೋಡುತ್ತ ನೋಡುತ್ತ ಮುಗ್ಧ ಮನೋಹರೆಯಾದ ಆ ಮಲಯವತಿಯ ಅಸದೃಶವಾದ ರೂಪಿಗೆ ಜೀಮೂತವಾಹನನು ಮನಸೋತನು. ಅವಳಾರೆಂಬುದು ಅವನಿಗೆ ತಿಳಿಯಲಿಲ್ಲ. ಆದರೂ ಅವಳ ಅನುಪಮ ಲಾವಣ್ಯವನ್ನು ನೋಡಿ, ''ಇವಳು ಸುರಾಂಗನೆಯಾಗಿದ್ದರೆ ಮಹೇಂದ್ರನ ಆ ಸಹಸ್ರ ನಯನಗಳಿಗೂ ಸಾರ್ಥಕತೆಯುಂಟಾಯಿತು. ನಾಗಕನ್ನಿಕೆಯಾಗಿದ್ದರೆ ಇವಳ ಮುಖಚಂದ್ರನಿರುವುದರಿಂದ ರಸಾತಲಕ್ಕೆ ಚಂದ್ರನಿಲ್ಲವೆಂಬ ಕೊರತೆ ಕಳೆದಂತೆಯೇ'' ಎಂದು ತನ್ನಲ್ಲಿ ತಾನೇ ಆಶ್ಚರ್ಯಪಡುತ್ತಿದ್ದನು. ಆಗಿನ ಅವನ ಸ್ಥಿತಿಯನ್ನು ಕಂಡು ಆತ್ರೇಯನು, ''ದೈವಯೋಗದಿಂದ ನನ್ನ ಮಿತ್ರನು ಮನ್ಮಥನ ದೃಷ್ಟಿಗೊಳಗಾದನು'' ಎಂದು ತನ್ನಲ್ಲಿ ತಾನೇ ಆನಂದಪಡುತ್ತಿದ್ದನು.

ಆಮೇಲೆ, ದೇವಾಯತನದಲ್ಲಿ ಇನ್ನೂ ವೀಣೆಯನ್ನು ನುಡಿಸುತ್ತಲೇ ಇದ್ದ ಮಲಯವತಿಯನ್ನು ಕಂಡು ಚೇಟಿಯು, ''ಒಡತಿ, ನಾನು ಮತ್ತೊಮ್ಮೆ ಹೇಳುವೆನು, ದಯಾರಹಿತೆಯಾದ ಈ ದೇವಿಯ ಮುಂದೆ ವೀಣೆಯನ್ನು ನುಡಿಸುವುದರಿಂದ ಯಾವ ಪ್ರಯೋಜನವೂ ಇಲ್ಲವೆಂದು'' ಎಂಬುದಾಗಿ ಹೇಳಿದುದನ್ನು ಕೇಳಿ ಮಲಯವತಿಯು ರೋಷಾವಿಷ್ಟಳಾಗಿ ಪೂಜ್ಯಳಾದ ಗೌರಿಯನ್ನು ನಿಂದಿಸಕೂಡದೆಂದೂ, ಅಂದು ತನಗೆ ಆ ದೇವಿಯು ಪ್ರಸನ್ನಳಾಗಿ, ವಿದ್ಯಾಧರ ಚಕ್ರವರ್ತಿಯು ತನ್ನ ಕೈಹಿಡಿಯುವನೆಂದು ಅನುಗ್ರಹಿಸಿರುವಳೆಂದೂ ಹೇಳಿದಳು. ಚೇಟಿಗೆ ಸಂತೋಷವಾಯಿತು.

ಮಲಯವತಿಯ ಆ ಮಾತನ್ನು ಕೇಳಿದೊಡನೆಯೆ ಆತ್ರೇಯನಿಗೆ ಎಲ್ಲಿಲ್ಲದ ಸಂತೋಷವು ಸಮನಿಸಿತು; ಜೀಮೂತವಾಹನನು ಒಪ್ಪದಿದ್ದರೂ ಬಲಾತ್ಕಾರದಿಂದ ಅವನೊಡನೆ ದೇವಾಯತನವನ್ನು ಪ್ರವೇಶಿಸಿದನು. ಸುಂದರಾಕಾರನಾದ ಜೀಮೂತವಾಹನನನ್ನು ಕಂಡೊಡನೆಯೆ ಮಲಯವತಿಯ ಮನಸ್ಸಿನಲ್ಲಿ ಪ್ರೇಮವು ಮೂಡಿತು. ದೇವಿಯು ಅನುಗ್ರಹಿಸಿದ ಪ್ರಸಾದವೇ ಮೈದೋರಿರಬಹುದೆಂದು ಚೇಟಿಯು ಹೇಳಿದಮೇಲಂತೂ

ಮಲಯವತಿಗೆ ಅಪರಿಮಿತವಾದ ಆನಂದವುಂಟಾಯಿತು. ಅವಳು ನಾಚಿ, ತಲೆ ತಗ್ಗಿಸಿ, ಜೀಮೂತವಾಹನನನ್ನೇ ಓರೆ ನೋಟದಿಂದ ನೋಡುತ್ತ ನಿಂತಳು. ನಾಚಿಕೆ ತಾನೇತಾನಾಗಿ, ಚೇಟಿಯೊಡನೆ ಅವಳು ಹೊರಟು ಹೋಗುವುದರಲ್ಲಿರಲು ಅವಳನ್ನು ಒಂದು ಮುಹೂರ್ತಕಾಲ ಅಲ್ಲಿಯೇ ನಿಲ್ಲಿಸಬಯಸಿ ಆತ್ರೇಯನು; "ಪೂಜ್ಯಳೇ! ಈ ತಪೋವನದಲ್ಲಿ ನಿಮ್ಮ ಈ ಆಚಾರವು ನನಗೆ ಅರ್ಥವಾಗಲಿಲ್ಲ. ಅತಿಥಿಯು ಆಗಮಿಸಿರುವಾಗ ಬಾಯಿಮಾತಿನಿಂದಾದರೂ ಗೌರವಿಸಬಾರದೆ?" ಎಂದನು. ಚೇಟಿಯು ಆ ಮಾತನ್ನಾಲಿಸಿ, ತನ್ನ ಸಖಿಯ ಚೇಷ್ಟಾವಿಶೇಷಗಳನ್ನು ಕಂಡು, ಅವಳ ದೃಷ್ಟಿಯೆಲ್ಲವೂ ಜೀಮೂತವಾಹನನಲ್ಲಿಯೇ ನೆಲಸಿರುವುದನ್ನು ತಿಳಿದು, "ಮಹಾಭಾಗ! ನಿನಗೆ ಸ್ವಾಗತವಾಗಲಿ, ಕುಳಿತುಕೊಳ್ಳಬೇಕು" ಎಂದಳು.

ಆತ್ರೇಯನೂ ಜೀಮೂತವಾಹನನೂ ಚೇಟಿಯ ಸೂಚನೆಯಂತೆ ಅಲ್ಲಿ ಕುಳಿತಮೇಲೆ, ಮಲಯವತಿಗೂ ಅವರಿಗೂ ಸಂಭಾಷಣೆ ಬೆಳೆಯು ವಷ್ಟರಲ್ಲಿಯೇ, ಕುಲಪತಿಗಳಾದ ಕೌಶಿಕರ ಆಜ್ಞೆಯಂತೆ ಮಾಧ್ಯಂದಿನದ ಸವನದರ್ಶನಾರ್ಥವಾಗಿ ಮಲಯವತಿಯನ್ನು ಕರೆದುಕೊಂಡುಹೋಗಲು ಶಾಂಡಿಲ್ಯನೆಂಬ ತಾಪಸನು ಅಲ್ಲಿಗೆ ಬಂದನು. ಅವನು ಜೀಮೂತ ವಾಹನನ ಗುರುತರಿಯದಿದ್ದರೂ ಅವನ ಹೆಜ್ಜೆ ಗುರುತುಗಳಲ್ಲಿದ್ದ ಚಕ್ರ ಚಿಹ್ನೆಗಳನ್ನು ಕಂಡು, ಅವನೇ ವಿದ್ಯಾಧರ ಚಕ್ರವರ್ತಿಯಾಗುವ ಜೀಮೂತ ವಾಹನನೆಂದು ತರ್ಕಿಸಿದನು. ಸಿದ್ಧಯುವರಾಜನಾದ ಮಿತ್ರಾವಸುವು ಮಲಯವತಿಯನ್ನು ಅವನಿಗೆ ಕೊಟ್ಟು ಮದುವೆಮಾಡಬೇಕೆಂದು ಬಯಸಿದ್ದ ವಿಷಯವೂ ಅವನಿಗೆ ಗೊತ್ತಿದ್ದಿತು. ಅವನು ಮಲಯವತಿ ಯನ್ನು ಕಂಡು ಕೌಶಿಕರ ಆಜ್ಞೆಯನ್ನು ಅವಳಿಗೆ ತಿಳಿಸಿದನು.

ಒಂದುಕಡೆ ಗುರುವಚನ; ಇನ್ನೊಂದುಕಡೆ ದಯಿತದರ್ಶನ ಸುಖ. ಹೋಗುವುದಕ್ಕೂ ಇಲ್ಲ; ನಿಲ್ಲುವುದಕ್ಕೂ ಇಲ್ಲ. ಮಲಯವತಿಯ ಮನಸ್ಸು ಇಕ್ಕಟ್ಟಿನಲ್ಲಿ ಸಿಲುಕಿ ತೊನೆಯಿತು. ಆದರೂ ಹೇಗೋ ಕಷ್ಟ ದಿಂದ ಮನಸ್ಸನ್ನು ನೆಲೆಗೆ ತಂದುಕೊಂಡು, ಜೀಮೂತವಾಹನನನ್ನು ಅನುರಾಗಪೂರಿತವಾಗಿ ಮತ್ತೆ ಮತ್ತೆ ನೋಡುತ್ತ, ಶಾಂಡಿಲ್ಯನೊಡನೆ ಹೊರಟುಹೋದಳು.

ಜೀಮೂತವಾಹನನ ಮನಸ್ಸು ಮಲಯವತಿಯಲ್ಲಿ ಸೇರಿ ಹೋಯಿತು. "ನೋಡಬೇಕಾದುದನ್ನು ನೋಡಿಯಾಯಿತು. ಕೇಳಬೇಕಾದುದನ್ನು ಕೇಳಿಯಾಯಿತು. ಇನ್ನು ಹೋಗೋಣ, ನಡೆ" ಎಂದು ಆತ್ರೇಯನು ಹೇಳಲು, ಅವನೂ ಮಲಯವತಿಯನ್ನೇ ಧ್ಯಾನಿಸುತ್ತ ಆಶ್ರಮಕ್ಕೆ ಹಿಂತಿರುಗಿದನು.

ಮಾರನೆಯ ದಿನ, ಮಲಯವತಿಯು ಜೀಮೂತವಾಹನನನ್ನು ಕಂಡುದರಿಂದ ತನ್ನಲ್ಲಿ ಉದಿಸಿದ ನಿರ್ವ್ಯಾಜಪ್ರೇಮವನ್ನೂ ಅದರಿಂದ ಉಂಟಾದ ವಿರಹತಾಪವನ್ನೂ ತನ್ನ ಸಖಿಯರಲ್ಲಿ ಹೇಳಿಕೊಂಡು, ಅವನನ್ನು ಮತ್ತೊಮ್ಮೆ ಕಾಣಲು ಆತುರಪಡುತ್ತಿದ್ದಳು. ಉದ್ಯಾನದಲ್ಲಿ ಎಳಬಾಳೆಗಳು ಸುತ್ತುವರಿದ ಚಂದನ ಲತಾಗೃಹದಲ್ಲಿ ಚಂದ್ರಮಣಿ ಶಿಲಾತಲವನ್ನಲಂಕರಿಸಿ ಅಲ್ಲಿ ಕುಳಿತು ತನ್ನ ವಿರಹವೇದನೆಯನ್ನು ತೋಡಿಕೊಂಡಳು. ವಿಚಿತ್ರ ರಮಣೀಯವಾದ ಆ ಚಂದನ ಲತಾಗೃಹವನ್ನು ನೋಡುತ್ತ ನೋಡುತ್ತ ಅವಳ ಸಂತಾಪವು ಹೆಚ್ಚುತ್ತ ಹೋಯಿತು. ತನ್ನಂತೆಯೇ ಅವನೂ ಸಂತಪ್ತ ಹೃದಯನಾಗಿರಬಹುದೇ ಎಂದು ಅವಳಿಗೆ ಸಂದೇಹವಾಯಿತು.

ಈ ಸ್ಥಿತಿಯಲ್ಲಿದ್ದ ಮಲಯವತಿಯ ಮನಸ್ಸು ಚೇಟಿಗೆ ಗೊತ್ತಾಯಿತು. ಜೀಮೂತವಾಹನನನ್ನೇ ಅವಳು ಮೋಹಿಸಿರುವಳೆಂಬ ವಿಚಾರವು ಅವಳಿಗೆ ತಿಳಿದಿದ್ದರೂ ಖಚಿತವಾಗಿ ಆ ವಿಷಯವನ್ನು ಅವಳಿಂದಲೇ ತಿಳಿದುಕೊಳ್ಳಬೇಕೆಂದು, "ಒಡತಿ, ನಿನ್ನ ಮನಸ್ಸನ್ನು ನಾನು ಬಲ್ಲೆ. ಆ ವರನು ಯಾರು?" ಎಂದು ಕೇಳಿದಳು. ಮಲಯವತಿಯು ಲಜ್ಜಿತಳಾಗಿ, ಏನೂ ಹೇಳದೆ ಸುಮ್ಮನಾಗಲು ಚೇಟಿಯು, ದೇವಿಯು ಸ್ವಪ್ನದಲ್ಲಿ ಕೊಟ್ಟ ವರವನ್ನು ಅವಳ ಜ್ಞಾಪಕಕ್ಕೆ ತಂದು, ದೇವಾಲಯದಲ್ಲಿ ಜೀಮೂತವಾಹನನನ್ನು ಕಂಡಂದಿನಿಂದ ಅವಳ ಮನಸ್ಸು ಪರಿತಪಿಸುತ್ತಿರುವುದನ್ನು ಸೂಚಿಸಿ, ಆ ಸುಂದರ ಪುರುಷನೇ ಅವಳ ಸಂತಾಪಕ್ಕೆ ಕಾರಣವಾಗಿರಬಹುದೇ ಎಂದು ಮತ್ತೊಮ್ಮೆ ಪ್ರಶ್ನಿಸಿದಳು. ಮಲಯವತಿಯು ಏನನ್ನೂ ಮರೆಮಾಚದೆ ತನ್ನ ಮನೋಗತವನ್ನು ಅವಳಿಗೆ ತಿಳಿಸಿದಳು.

ಆ ಹೊತ್ತಿಗೆ, ಮಲಯವತಿಯನ್ನು ಕಂಡಂದಿನಿಂದ ವಿರಹಜ್ವರ ಪೀಡಿತನಾಗಿದ್ದ ಜೀಮೂತವಾಹನನು ಏನುಮಾಡಲೂ ತೋರದೆ, ತಾನು ಕಂಡಿದ್ದ ಸ್ವಪ್ನದಂತೆ ಅದೇ ಉದ್ಯಾನದಲ್ಲಿ ಮಲಯವತಿಯು ಚಂದ್ರಕಾಂತ ಮಣಿಶಿಲೆಯ ಆಸನದಲ್ಲಿ ಕಾಣುವಳೆಂಬ ಆಸೆಯಿಂದ ಆ ಉದ್ಯಾನಕ್ಕೆ ಬಂದನು. ಆತ್ರೇಯನು ಅವನನ್ನು ಉಚಿತವಾದ ವಚನ ಗಳಿಂದ ಸಂತಯಿಸುತ್ತ ಹಿಂಬಾಲಿಸುತ್ತಿದ್ದನು. ಚೇಟಿ ಚತುರಿಕೆಯು ಅವರ ಬರುವಿಕೆಯನ್ನು ಅರಿತು ಮಲಯವತಿಯನ್ನು ಎಚ್ಚರಿಸಿದಳು. ಮಲಯವತಿಯೂ ಚತುರಿಕೆಯೂ ಅಶೋಕ ವೃಕ್ಷದ ಮರೆಯಲ್ಲಿ ನಿಂತು ಅವರಿಬ್ಬರ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಜೀಮೂತವಾಹನನು ಚಂದನ ಲತಾಗೃವನ್ನು ಪ್ರವೇಶಿಸಿ, ಚಂದ್ರಕಾಂತ ಮಣಿಶಿಲೆಯ ಆಸನದ ಮೇಲೆ ಕುಳಿತುಕೊಂಡನು. ಮಲಯವತಿಯು ಅವನನ್ನು ಕಂಡು ಆನಂದಿಸಿದಳು. ಆದರೂ ಅವಳಿಗೆ ಯಾರಾದರೂ ನೋಡಿಯಾರೆಂಬ ಭಯವಡಸಿ ಅಲ್ಲಿ ನಿಲ್ಲಲು ಸಂಕೋಚವಾಯಿತು. ಚತುರಿಕೆಯು ಅವಳನ್ನು ಸಮಾಧಾನಗೊಳಿಸಿ, ಪ್ರಿಯನ ಸಂದರ್ಶನ ಭಾಗ್ಯವನ್ನು ಸಂಪೂರ್ಣವಾಗಿ ಅನುಭವಿಸೆಂದೂ ಅಶೋಕ ವೃಕ್ಷದ ಮರೆಯಲ್ಲಿರುವುದ ರಿಂದ ಯಾರೂ ತಮ್ಮನ್ನು ನೋಡರೆಂದೂ ಹೇಳಿದಳು.

ಜೀಮೂತವಾಹನನು ತಾನು ಕಂಡಿದ್ದ ಸವಿಗನಸು ಫಲಿಸದೆ ಹೋಗಲು ವಿರಹವ್ಯಥೆಯು ಹೆಚ್ಚಿ, ದೀನನಾದನು. ತನ್ನ ನಯನ ಮನೋಹರೆಯನ್ನು ಚಿತ್ರಿಸಿ ನೋಡಿಯಾದರೂ ಕಣ್ಣಿಗೆ ಹಬ್ಬವನ್ನು ಅನುಭವಿಸಬೇಕೆಂದು ಅವನಿಗೆ ತೋರಿತು. ಆತ್ರೇಯನು ಅವನ ಬಯಕೆ ಯಂತೆ ಸಮೀಪದ ಬೆಟ್ಟಗುಡ್ಡಗಳಿಂದ ಮಣಿಶಿಲೆಯೇ ಮುಂತಾದ ಬಣ್ಣಗಲ್ಲುಗಳನ್ನು ತಂದುಕೊಟ್ಟನು. ಜೀಮೂತವಾಹನನು ತನ್ನ ಹೃದಯ ಫಲಕದಲ್ಲಿ ಅಚ್ಚಾಗಿದ್ದ ಆ ಸುಂದರಿಯ ಪ್ರತಿಚ್ಛಾಯೆಯನ್ನು ಹಾಸು ಗಲ್ಲಮೇಲೆ ಚಿತ್ರಿಸಿ ತಣಿದನು. ಅವನಿಗೆ ತನ್ನ ಪ್ರಿಯೆಯೇ ಪ್ರತ್ಯಕ್ಷವಾಗಿ ಅದರಲ್ಲಿ ಬಿಂಬಿಸಿದಂತಾಯಿತು. ಅವನ ಸಂತೋಷಕ್ಕೆ ಪಾರವಿಲ್ಲ ವಾಯಿತು.

ಇಷ್ಟು ಹೊತ್ತು ಮರೆಯಲ್ಲಿ ನಿಂತು, ಜೀಮೂತವಾಹನನು

ಆತ್ರೇಯನೊಡನೆ ಆಡಿಕೊಳ್ಳುತ್ತಿದ್ದ ಒಲವಿನ ಮಾತುಗಳು, ಅವನ ಸಂತಾಪ, ಅದಕ್ಕೆ ಆತ್ರೇಯನು ಹೇಳುತ್ತಿದ್ದ ಸಮಾಧಾನ, ಆಮೇಲಣ ಚಿತ್ರಲೇಖನ—ಇಷ್ಟನ್ನೂ ಕಂಡು ಮಲಯವತಿಗೆ ಮನಸ್ಸು ಇಳಿದು ಹೋಯಿತು. ಅವನು ಮತ್ತಾವಳೊ ಒಬ್ಬ ಸುಂದರಿಯನ್ನು ಮೆಚ್ಚಿ ತನ್ನ ಹೃದಯವನ್ನು ಸೂರೆಕೊಟ್ಟಿರಬಹುದೆಂದು ಅವಳು ಅರಿತಳು. ಜೀಮೂತವಾಹನನು ಮೆಚ್ಚಿ ಮುಗ್ಧನಾಗಿರುವುದು ಮಲಯವತಿಯ ರೂಪಕ್ಕೇ ಎಂಬುದನ್ನು ಚತುರಿಕೆಯು ಚೆನ್ನಾಗಿ ತಿಳಿದಿದ್ದಳಾದುದರಿಂದ ಹಲಬಗೆಯಿಂದ ಅವಳನ್ನು ಸಮಾಧಾನಪಡಿಸಲೆತ್ನಿಸಿದಳು. ಆದರೂ ಅವಳ ಮನೋರಥವು ಕಳಚಿಬಿದ್ದಂತೆ ತೋರಿ ಅವಳು ಆ ಸ್ಥಳವನ್ನು ಬಿಟ್ಟು ಹೊರಟುಹೋಗುವುದರಲ್ಲಿದ್ದಳು.

ಈ ಹೊತ್ತಿಗೆ ಸರಿಯಾಗಿ ಸಿದ್ಧ ಚಕ್ರವರ್ತಿಯಾದ ವಿಶ್ವಾವಸುವಿನ ಮಗ ಮಿತ್ರಾವಸುವು ಜೀಮೂತವಾಹನನನ್ನೇ ಹುಡುಕಿಕೊಂಡು ಚಂದನ ಲತಾಗೃಹಕ್ಕೆ ಬಂದನು. ಅವನಾಡಿದ ಮಾತುಗಳಿಂದ ತಂದೆಯ ಅಪ್ಪಣೆಯಂತೆ ಮಲಯವತಿಯನ್ನು ಪಾಣಿಗ್ರಹಣ ಮಾಡಿಕೊಳ್ಳುವಂತೆ ಜೀಮೂತವಾಹನನನ್ನು ಕೇಳಿಕೊಳ್ಳಲು ಅವನು ಬಂದಿರುವುದಾಗಿ ಮಲಯವತಿಗೂ ಚತುರಿಕೆಗೂ ತಿಳಿಯಿತು. ಆತ್ರೇಯನು ಅವನ ಬರವಿನ ಸುಳಿವನ್ನರಿತು ಮೊದಲೇ ಜೀಮೂತವಾಹನನು ಚಿತ್ರಿಸಿದ್ದ ಚಿತ್ರವನ್ನು ಬಾಳೆಯೆಲೆಯಿಂದ ಮರೆಮಾಡಿದ್ದನು. ಮಲಯವತಿಗೆ ಸ್ವಲ್ಪ ಆಸೆಯಂಕುರಿಸಿತು. ಮಿತ್ರಾವಸುವಿನ ಪ್ರಾರ್ಥನೆಗೆ ಜೀಮೂತವಾಹನನು ಹೇಳುವ ಮಾತನ್ನು ಕೇಳಬೇಕೆಂಬ ಕುತೂಹಲವುಂಟಾಗಿ ಅಲ್ಲಿಯೇ ನಿಂತಳು.

ಮಿತ್ರಾವಸುವು ಜೀಮೂತವಾಹನನನ್ನು ಕಂಡು ತನ್ನ ತಂದೆ ವಿಶ್ವಾವಸುವಿನ ಮನೋಗತವನ್ನು ತಿಳಿಸಿ, ಮಲಯವತಿಯನ್ನು ಪರಿಗ್ರಹಿಸಬೇಕೆಂಬ ಆತನ ಸಂದೇಶವನ್ನರಿಕೆಮಾಡಿದನು. ಜೀಮೂತವಾಹನನಿಗೆ ಮಲಯವತಿಯೇ ತಾನು ಮೆಚ್ಚಿರುವ ಸ್ತ್ರೀಯೆಂಬುದು ಗೊತ್ತಿಲ್ಲ. ಗೌರೀನಿಲಯದಲ್ಲಿ ತಾನು ಕಂಡಿದ್ದ ಆ ಸ್ತ್ರೀಯು ತನ್ನ ಮನಸ್ಸೆಲ್ಲವನ್ನೂ ಸೂರೆಗೊಂಡಿದ್ದಳು. ಅವನಿಗೆ ಮತ್ತೊಬ್ಬ ಸುಂದರಿಯ

ಬಯಕೆಯಿರಲಿಲ್ಲ. ಆದರೂ ಕೇವಲ ದಾಕ್ಷಿಣ್ಯ ಪ್ರಕೃತಿಯವನಾದುದರಿಂದ, "ತವ್ಮೊಡನೆ ಸಂಬಂಧವನ್ನು ಬಯಸದವನಾರು? ಆದರೆ ಬೇರೊಂದೆಡೆ ಪ್ರವರ್ತಿಸಿರುವ ಮನಸ್ಸನ್ನು ಹಿಂತಿರುಗಿಸಲು ಸಾಧ್ಯವಾಗದು. ಆದರಿಂದ ಆಕೆಯನ್ನು ತಂದುಕೊಳ್ಳುವುದು ನನ್ನಿಂದಾಗದು" ಎಂದು ಹೇಳಿದನು.

ಈ ಮಾತನ್ನು ಕೇಳುತ್ತಲೆ ಮಲಯವತಿಯ ಆಸೆಗಳೆಲ್ಲ ಬರಿದಾಗಿ ಹೋದುವು. ದುಃಖಪ್ರೊತ್ತಿಬಂದು ಮೂರ್ಛೆಹೋದಳು. ಚೇಟಿ ಚತುರಿಕೆಯು ಅವಳನ್ನು ಸಂತಯಿಸಿದಳು. ಅಷ್ಟರಲ್ಲಿ ಆತ್ರೇಯನು ತನ್ನ ಮಿತ್ರನ ಉತ್ತರವು ಮಿತ್ರಾವಸುವಿಗೆ ಅಸಮಾಧಾನವನ್ನುಂಟುಮಾಡಿತೆಂದರಿತು ಅವನನ್ನು ಸಮಾಧಾನಪಡಿಸಲೋಸುಗ, "ಅಯ್ಯಾ! ಪರಾಧೀನನಾದ ಈತನನ್ನು ಪ್ರಾರ್ಥಿಸುವುದರಿಂದೇನು ಪ್ರಯೋಜನ? ಈತನ ತಾಯಿತಂದೆಗಳಲ್ಲಿ ಈ ವಿಚಾರವನ್ನು ಪ್ರಸ್ತಾಪಿಸು" ಎಂದನು. ಮಿತ್ರಾವಸುವು ಅದು ಯುಕ್ತವೆಂದುಕೊಂಡು ಗೌರ್ಯಾಶ್ರಮದಲ್ಲಿ ವಾಸವಾಗಿದ್ದ ಜೀಮೂತವಾಹನನ ತಂದೆ ಜೀಮೂತಕೇತುವನ್ನು ಕಾಣಲು ಹೊರಟುಹೋದನು.

ಇತ್ತ ಮಲಯವತಿಯು ತಾನು ತನ್ನ ಸರ್ವಸ್ವವನ್ನು ಯಾರಿಗಾಗಿ ಸಮರ್ಪಿಸಬೇಕೆಂದು ಬಯಸಿ ಒಲಿದಿದ್ದಳೋ ಆ ಜೀಮೂತವಾಹನನು ಬೇರೊಬ್ಬಳನ್ನು ಮೆಚ್ಚಿರುವನೆಂದು ತಿಳಿದು ಇನ್ನು ತಾನು ಬದುಕಿ ಪ್ರಯೋಜನವೇನೆಂದು ಸಖಿಯರನ್ನು ವಂಚಿಸಿ ಪ್ರಾಣತ್ಯಾಗ ಮಾಡಲು ಸಂಕಲ್ಪಿಸಿದಳು. ಚತುರಿಕೆಗೆ ಬಹಳ ಹೆದರಿಕೆಯಾಗಿ, ವಿಪತ್ತನ್ನು ಶಂಕಿಸಿ, ಉಪಾಯಾಂತರದಿಂದ ತನ್ನನ್ನು ದೂರ ಮಾಡಲು ಅವಳು ಪ್ರಯತ್ನಿಸಿದರೂ ಮರೆಯಲ್ಲಿ ನಿಂತು ನೋಡುತ್ತಿದ್ದಳು.

ಮಲಯವತಿಯು ಯಾರೂ ಇಲ್ಲವೆಂದು ನಂಬಿ ಕೊರಳಿಗೆ ಹಗ್ಗವನ್ನು ಬಿಗಿದುಕೊಂಡು ನೇಣು ಹಾಕಿಕೊಳ್ಳುವುದರಲ್ಲಿದ್ದಳು. ಅದನ್ನು ನೋಡುತ್ತಲೆ ಚತುರಿಕೆಯು ರಕ್ಷಣೆಗಾಗಿ ಕೂಗಿಕೊಂಡಳು. ಸಮೀಪದಲ್ಲಿಯೆ ಇದ್ದ ಜೀಮೂತವಾಹನನು ಜಾಗ್ರತೆಯಾಗಿ ಆ ಸ್ಥಳಕ್ಕೆ ಹೋಗಿ, ತಾನು ಯಾರನ್ನು ಮೆಚ್ಚಿ ಯಾರಿಗಾಗಿ ಹಗಲಿರುಳೂ ವಿರಹ

ದುಃಖವನ್ನನುಭವಿಸುತ್ತಿದ್ದನೋ ಆ ಸುಂದರಿಯೇ ಅವಳಾಗಿದ್ದುದನ್ನು ಕಂಡು ಅವಳ ಆತ್ಮಹತ್ಯೆಯ ಪ್ರಯತ್ನವನ್ನು ತಪ್ಪಿಸಿದನು. ಅವಳ ಆತ್ಮಹತ್ಯೆಗೆ ತಾನೇ ಕಾರಣವೆಂಬ ಸಂಗತಿಯನ್ನು ಚತುರಿಕೆಯಿಂದ ಕೇಳಿದಮೇಲಂತೂ ಜೀಮೂತವಾಹನನಿಗೆ ಅತ್ಯಾಶ್ಚರ್ಯವಾಯಿತು. ಆಮೇಲೆ ಅವನಿಗೆ ಅವಳೇ ಮಲಯವತಿಯೆಂದೂ ಸಿದ್ಧಚಕ್ರವರ್ತಿಯ ಪ್ರಾರ್ಥನೆಯನ್ನು ತಾನು ನಿರಾಕರಿಸಿದುದರಿಂದ ಅವಳು ಆ ಪ್ರಯತ್ನ ವನ್ನು ಮಾಡಿದಳೆಂದೂ ಗೊತ್ತಾಯಿತು. ರತ್ನಾಕರನನ್ನುಳಿದು ಚಂದ್ರ ಲೇಖೆಯು ಮತ್ತೆಲ್ಲಿಯಾದರೂ ಉದಿಸುವುದೆ? ಎಂದು ಅವನ ಮನಸ್ಸು ಹರ್ಷಮಗ್ನವಾಯಿತು.

ಜೀಮೂತವಾಹನನು ಚಿತ್ರಿಸಿದ್ದ ತನ್ನ ಚಿತ್ರವನ್ನು ಮಲಯ ವತಿಯು ಕಣ್ಣಾರೆ ಕಂಡಮೇಲೆ, ಅವನು ತನ್ನನ್ನು ನಿಜವಾಗಿಯೂ ಪ್ರೇಮಿಸಿರುವನೆಂದು ನಂಬಿದಳು. ಅವಳ ಆನಂದಕ್ಕೆ ಪಾರವಿಲ್ಲ ವಾಯಿತು. ಅಷ್ಟು ಹೊತ್ತಿಗೆ ಚೇಟಿಯೊಬ್ಬಳು ಅಲ್ಲಿಗೆ ಬಂದು, ಜೀಮೂತಕೇತುವು ಮಲಯವತಿಯನ್ನು ತನ್ನ ಮಗನಿಗೆ ತಂದು ಕೊಳ್ಳಲು ಒಪ್ಪಿರುವುದಾಗಿಯೂ ವಿವಾಹೋತ್ಸವ ಮಂಗಳಕ್ಕಾಗಿ ತ್ವರೆ ಮಾಡಬೇಕೆಂದು ಹೇಳಿಕಳುಹಿಸಿರುವುದಾಗಿಯೂ ಅರಿಕೆಮಾಡಿದಳು. ಮಲಯವತಿಯು ಚತುರಿಕೆಯೊಡನೆ ಅರಮನೆಗೆ ಹೊರಟುಹೋದಳು. ಜೀಮೂತವಾಹನನು ಸಂತೋಷ ಸಂಭ್ರಮಯುಕ್ತನಾಗಿ ತಂದೆಯನ್ನು ಸಂದರ್ಶಿಸಲು ಗೌರ್ಯಾಶ್ರಮಕ್ಕೆ ತೆರಳಿದನು.

ಮದುವೆಯು ವಿದ್ಯಾಧರ ಚಕ್ರವರ್ತಿಯ ವೈಭವಕ್ಕನುಗುಣವಾಗಿ ನೆರವೇರಿತು. ಮಹೋತ್ಸವವು ಎಲ್ಲೆಲ್ಲಿಯೂ ಸಂತೋಷ ಸಂಭ್ರಮಗಳಿಂದ ನಡೆಯುತ್ತಿದ್ದಿತು. ಹೊಸ ದಂಪತಿಗಳಾದ ಮಲಯವತಿ ಜೀಮೂತ ವಾಹನರ ಸಂತೋಷಕ್ಕೂ ಎಣೆಯಿಲ್ಲವಾಯಿತು. ವಿವಾಹ ವೇಷಾ ಲಂಕೃತರಾದ ಅವರಿಬ್ಬರೂ ಕುಸುಮಾಕರೋದ್ಯಾನದ ಸೊಬಗನ್ನು ನೋಡಿ ನಲಿಯಲು ಪರಿವಾರಸಮೇತರಾಗಿ ಅಲ್ಲಿಗೆ ಬಂದರು. ಅಲ್ಲಿನ ಚಂದನ ವೃಕ್ಷಗಳು ಲತಾಮಂಟಪದ ಜಗುಲಿಗಳನ್ನು ತಣ್ಣೆಳಲ ಹರವಿ ನಿಂದ ಸಿಂಗರಿಸಿದ್ದುವು. ಅಲ್ಲಿನ ಧಾರಾಗೃಹಗಳ ದನಿಗಳನ್ನಾಲಿಸಿ

ನವಿಲುಗಳು ನಾಟ್ಯವಾಡುತ್ತಿದ್ದುವು. ಯಂತ್ರದಿಂದ ಹರಿಯಿಸಿದ ನೀರು ಕುಸುಮರಜದಿಂದ ಪಿಂಜರ ವರ್ಣವಾಗಿ ಕಂಗೊಳಸುತ್ತಿದ್ದಿತು. ಲತಾ ಮಂಟಪಗಳಲ್ಲಿ ಸಹಚರಿಗಳೊಡಗೂಡಿದ ಮಧುಕರಗಳು ಕುಸುಮರಸ ವನ್ನು ಸಂತೃಪ್ತಿಯಾಗಿ ಪಾನಮಾಡಿ ಎಲ್ಲೆಲ್ಲಿಯೂ ಮಧುರ ಮಧುರವಾಗಿ ಝೇಂಕಾರ ಮಾಡುತ್ತ ಆಪಾನೋತ್ಸವದಲ್ಲಿ ತೊಡಗಿದ್ದುವು.

ಮಲಯವತಿಯೂ ಜೀಮೂತವಾಹನನೂ ಕಣ್ಗಿಂಪಾದ ಆ ಸುಂದರ ದೃಶ್ಯಗಳನ್ನೆಲ್ಲ ನೋಡಿ ನಲಿಯುತ್ತ ಪ್ರಿಯಾಲಾಪಗಳಿಂದ ವಿಹರಿಸುತ್ತಿರು ವಂತೆಯೆ, ಮಿತ್ರಾವಸುವು ಅಲ್ಲಿಗೆ ಬಂದನು. ಹಗೆಯಾದ ಮತಂಗನು ವಿದ್ಯಾಧರ ರಾಜ್ಯವನ್ನು ಅಪಹರಿಸಿರುವನೆಂಬ ಅನಿಷ್ಟವಾರ್ತೆಯನ್ನು ಜೀಮೂತವಾಹನನಿಗೆ ತಿಳಿಸಲು ಅಲ್ಲಿಗೆ ಬಂದಿದ್ದುದು.

ಮಿತ್ರಾವಸುವು ಸಂಭ್ರಮದಿಂದ ಬಂದಿರುವುದನ್ನು ಕಂಡು ಪರಿವಾರಕ್ಕೆಲ್ಲ ಆಶ್ಚರ್ಯವಾಯಿತು. ಮತಂಗನು ರಾಜ್ಯವನ್ನು ಅಪಹರಿ ಸಿರುವ ಸುದ್ದಿಯನ್ನು ಅವನು ಜೀಮೂತವಾಹನನಿಗೆ ತಿಳಿಸಿದನು. ಅದರಿಂದ ಜೀಮೂತವಾಹನನಿಗೆ ಕೋಪತಾಪಗಳೇನೂ ಉಂಟಾಗಲಿಲ್ಲ. ಶಾಂತಚಿತ್ತದಿಂದ ಅವನು ಆ ಸುದ್ದಿಯನ್ನು ಕೇಳಿ, ಸ್ವಲ್ಪ ಹರ್ಷವನ್ನೇ ಸೂಚಿಸಿದನು. ಮಿತ್ರಾವಸುವು, ಅಪ್ಪಣೆಯಾದರೆ ಚತುರಂಗ ಬಲದೊಡನೆ ಹೊರಟು ಮತಂಗನನ್ನು ಕಾಳಗದಲ್ಲಿ ನಿರ್ಮೂಲಗೊಳಿಸುವುದಾಗಿ ಹೇಳಿದನು. ಜೀಮೂತವಾಹನನಿಗೆ ಇದು ಕರ್ಣಕಠೋರವಾಗಿ ಪರಿಣ ಮಿಸಿತು. ಭಯಂಕರವಾದ ಆ ಯುದ್ಧಪ್ರಸಂಗವು ಅವನಿಗೆ ಸಹ್ಯವಾಗ ಲಿಲ್ಲ. ಯುದ್ಧದಲ್ಲಿ ರಕ್ತದ ಕೋಡಿಯು ಹರಿಯುವುದು ಅವನಿಗೆ ಎಷ್ಟು ಮಾತ್ರಕ್ಕೂ ಪಥ್ಯವಾಗಲಿಲ್ಲ. ಬೇಡದಿದ್ದರೂ ಹೆರರಿಗಾಗಿ ತನ್ನೊಡಲನ್ನೇ ಸೂರೆಕೊಡುವ ಮಹಾತ್ಮನವನು. ಅಂತಹವನು ರಾಜ್ಯದ ಸಲುವಾಗಿ ಪ್ರಾಣಿವಧೆಯ ದಾರುಣವಾದ ಕಾರ್ಯಕ್ಕೆ ಸಮ್ಮತಿಸಿಯಾನೆ? "ಕ್ಲೇಶ ಗಳನ್ನುಳಿದು ನನಗೆ ಬೇರೊಂದೆಡೆ ಶತ್ರುಬುದ್ಧಿಯೇ ಇಲ್ಲ. ನೀನು ನನ್ನನ್ನು ಸಂತೋಷಪಡಿಸಬೇಕೆಂದು ಬಯಸಿರುವೆಯಾದರೆ ರಾಜ್ಯದ ಬಯಕೆ ಯಿಂದ ತಪಿಸುತ್ತಿರುವ ಆ ಮತಂಗನಲ್ಲಿ ದಯೆತೋರು" ಎಂದು ಅವನು ಮಿತ್ರಾವಸುವನ್ನು ಪ್ರಾರ್ಥಿಸಿದನು. ರೋಷಪರೀತಮಾನಸನಾದ

ಮಿತ್ರಾವಸುವಿಗೆ ಜೀಮೂತವಾಹನನ ಮಾತುಗಳು ಕಹಿಯಾಗಿ ತೋರಿದುವು. ಜೀಮೂತವಾಹನನು ಅವನನ್ನು ಹೇಗೊ ಸಮಾಧಾನ ಪಡಿಸಿ, ಪರಿವಾರದೊಂದಿಗೆ ಅಂತಃಪುರವನ್ನು ಪ್ರವೇಶಿಸಿದನು.

ಮಾರನೆಯ ದಿನ ಜೀಮೂತವಾಹನನು, ಮದುವೆಯ ಗುರುತಾಗಿ ಹತ್ತು ದಿನಗಳವರೆಗೂ ಉಡಬೇಕಾಗಿದ್ದ ಕೆಂಪುಡೆಯುಟ್ಟು ಮಿತ್ರಾವಸುವಿನೊಡನೆ ಮಲಯಪರ್ವತದ ತಪ್ಪಲಲ್ಲಿ ಸಂಚರಿಸುತ್ತ ಅಲ್ಲಲ್ಲಿನ ರಾಮಣೀಯಕವನ್ನು ಕಂಡು ಆನಂದಪಡುತ್ತಿದ್ದನು. ಪರ್ವತದ ಕಣಿವೆಗಳೆಲ್ಲವೂ ಶ್ವೇತವರ್ಣವಾಗಿ ಕಂಗೊಳಿಸುತ್ತಿದ್ದುದನ್ನು ನೋಡಿ ಜೀಮೂತವಾಹನನು, ಬಿಳಿಮುಗಿಲ ತಂಡಗಳು ಒಂದೆಡೆ ಸೇರಿ ಪರ್ವತವೇ ಪ್ರಾಲೇಯಾಚಲ ಶಿಖರದ ಕಾಂತಿಯನ್ನು ತಳೆದು ಮೆರೆಯುತ್ತಿದೆಯೆಂದು ಬಗೆದನು. ಮಿತ್ರಾವಸುವು ಅದು ಮುಗಿಲ ತಂಡಗಳಲ್ಲವೆಂದೂ ನಾಗಗಳ ಎಲುವಿನ ರಾಶಿಗಳೆಂದೂ ಹೇಳಿದನು. ಜೀಮೂತವಾಹನನಿಗೆ ಅನುಕಂಪ ಹುಟ್ಟಿತು. ನಾಗಗಳೆಲ್ಲವೂ ಒಟ್ಟಾಗಿ ಆ ರೀತಿ ಮೃತ್ಯುವಿಗೆ ತುತ್ತಾದುದೆಂತೆಂದು ಅವನು ಪ್ರಶ್ನಿಸಿದನು. ಮಿತ್ರಾವಸುವು, ನಾಗಗಳು ಸಮೂಹ ಮರಣಕ್ಕೆ ತುತ್ತಾಗಲಿಲ್ಲವೆಂದೂ, ಗರುಡನು ಪ್ರತಿದಿನವೂ ಒಂದೊಂದು ನಾಗವನ್ನು ರಸಾತಲದಿಂದ ಹಿಡಿದುತಂದು ತಿನ್ನುತ್ತಿರುವನೆಂದೂ ತಿಳಿಸಿದನು. ಜೀಮೂತವಾಹನನಿಗೆ ಮೊದಲೇ ಕಲಕಿಹೋಗಿದ್ದ ಮನಸ್ಸು ಮತ್ತಷ್ಟು ಕದಡಿಹೋಯಿತು. ಗರುತ್ಮಂತನು ಮಾಡಬಾರದ ಕೆಲಸವನ್ನು ಮಾಡುತ್ತಿರುವನೆಂದು ಅವನ ವಿಷಯದಲ್ಲಿ ಅಸಹ್ಯಭಾವನೆಯುಂಟಾಯಿತು. ಮಿತ್ರಾವಸುವು, ನಾಗರಾಜನಾದ ವಾಸುಕಿಯು ನಾಗಲೋಕವೆಲ್ಲವೂ ನಾಶವಾಗುವುದೆಂದು ಹೆದರಿ, ಪ್ರತಿದಿನವೂ ತಾನೇ ಒಂದೊಂದು ನಾಗವನ್ನು ಸಮುದ್ರತೀರದ ಬಳಿಗೆ ಕಳುಹಿಸುವುದಾಗಿ ಗರುತ್ಮಂತನನ್ನು ಪ್ರಾರ್ಥಿಸಿದನೆಂದು ಹೇಳಿದ ಮೇಲಂತೂ ಜೀಮೂತವಾಹನನಿಗೆ ಆ ವಾಸುಕಿಯ ವಿಷಯದಲ್ಲಿಯೂ ಜುಗುಪ್ಸೆಯುಂಟಾಯಿತು. "ಅಯ್ಯೋ! ತನಗೆ ಸಾವಿರ ನಾಲಗೆಗಳಿದ್ದರೂ ಆ ವಾಸುಕಿಯು ಯಾವೊಂದು ನಾಲಗೆಯಿಂದಲೂ 'ಇದೊ ನನ್ನನ್ನು ಅರ್ಪಿಸಿದ್ದೇನೆ' ಎಂದು ಹೇಳಲಿಲ್ಲವೆ!!" ಎಂಬುದಾಗಿ ಅವನು

ಮರುಗಿದನು. ನಾಗವಿನಾಶದ ಭಯಂಕರವಾದ ವಾರ್ತೆಯನ್ನು ಕೇಳಿಯಾದಮೇಲೆ ಜೀಮೂತವಾಹನನು ಸ್ವಶರೀರ ಸಮರ್ಪಣದಿಂದ ಒಬ್ಬ ನಾಗನನ್ನಾದರೂ ಸಂರಕ್ಷಿಸುವುದಾದರೆ ತಾನು ಕೃತಕೃತ್ಯನಾಗುವ ನೆಂದು ಯೋಚಿಸುತ್ತಿದ್ದನು.

ಆ ಹೊತ್ತಿಗೆ ಸರಿಯಾಗಿ, ತಂದೆಯಾದ ವಿಶ್ವಾವಸುವು ಹೇಳಿ ಕಳುಹಿಸಲು, ಮಿತ್ರಾವಸುವು "ಈ ಸ್ಥಳವು ಅನೇಕ ವಿಘ್ನಗಳನ್ನೊಳ ಗೊಂಡುದು. ಕುತೂಹಲಿಯಾದ ನೀನು ಇಲ್ಲಿ ಬಹಳ ಹೊತ್ತು ನಿಲ್ಲ ಕೂಡದು" ಎಂದು ಜೀಮೂತವಾಹನನಿಗೆ ಹೇಳಿ ಹೊರಟುಹೋದನು. ಜೀಮೂತವಾಹನನು ಮಲಯಪರ್ವತದ ಶಿಖರವನ್ನೇರಿ ಸಮುದ್ರತೀರದ ಸೌಂದರ್ಯವನ್ನು ನೋಡುತ್ತ ನಿಂತನು. ಆಗ ಎತ್ತಣಿಂದಲೊ ಹೆಂಗಸಿನ ದೀನಾಲಾಪವು ಕೇಳಬಂದಿತು. ಜೀಮೂತವಾಹನನಿಗೆ ಆಶ್ಚರ್ಯವಾಗಿ, ದನಿ ಬಂದ ದಿಕ್ಕಿನಲ್ಲಿಯೇ ಹೋಗಿ ನೋಡಿದನು.

ವೃದ್ಧೆಯಾದ ನಾಗಮಾತೆಯೊಬ್ಬಳು ಶಂಖಚೂಡನೆಂಬ ತನ್ನ ಏಕೈಕ ಪುತ್ರನು ಗರುಡನಿಗೆ ಆಹುತಿಯಾಗುವುದನ್ನು ಸಹಿಸಲಾರದೆ ಗೋಳಿಡುತ್ತಿದ್ದಳು. ನಾಗಕಿಂಕರನೊಬ್ಬನು ವಧ್ಯಚಿಹ್ನಗಳಾದ ರಕ್ತ ವಸ್ತ್ರಗಳನ್ನು ಶಂಖಚೂಡನಿಗೆ ಕೊಡುವುದರಲ್ಲಿದ್ದನು. ವೃದ್ಧಮಾತೆಯು ಆ ರಕ್ತವಸ್ತ್ರಯುಗಳವನ್ನು ಕಂಡೊಡನೆ ತನ್ನ ಮಗನ ಮರಣವು ಸಮೀಪಿಸಿತೆಂದು ದುಃಖಭರವನ್ನು ತಾಳಲಾರದೆ ಮೂರ್ಛೆಗೊಂಡಳು. ನಾಗಕಿಂಕರನು ರಕ್ತವಸ್ತ್ರಗಳನ್ನು ಶಂಖಚೂಡನಿಗೆ ಕೊಟ್ಟು, ವಧ್ಯಶಿಲೆಯ ಸಮೀಪದಲ್ಲಿ ತಾಯಿಮಕ್ಕಳನ್ನು ಬಿಟ್ಟು, ಗರುಡನು ಬರುವ ವೇಳೆ ಯಾಗಿದ್ದುದರಿಂದ ಜಾಗ್ರತೆಯಾಗಿ ಹಿಂತಿರುಗಿದನು.

ನಾಗಕಿಂಕರನು ಹೊರಟುಹೋದಮೇಲೆ ಶಂಖಚೂಡನು ಮೂರ್ಛೆ ಗೊಂಡಿದ್ದ ತನ್ನ ವೃದ್ಧಮಾತೆಯನ್ನು ಸಂತಯಿಸಿದನು. ಅವಳು ದುಃಖ ಪೀಡಿತೆಯಾಗಿ ವಿನಯಸಾಗರನಾದ ತನ್ನ ಮಗನ ಪೂರ್ಣಚಂದ್ರೋಪಮ ವಾದ ಮುಖವನ್ನು ನೋಡುವುದು ಇದೇ ಕಡೆ ಎಂದು ಅವನನ್ನು ತಬ್ಬಿ ರೋದಿಸತೊಡಗಿದಳು. ಶಂಖಚೂಡನು ಎಷ್ಟು ಸಮಾಧಾನಪಡಿಸಿದರೂ ಅವಳ ದುಃಖವು ಹೆಚ್ಚಿತಾಯಿತೇ ಹೊರತು ಶಾಂತಿಯನ್ನು ಹೊಂದಲಿಲ್ಲ.

ಆ ತಾಯಿ ಮಕ್ಕಳ ಪರಸ್ಪರ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಿದ್ದ ಜೀಮೂತವಾಹನನಿಗೆ ದಯಾರಸವುಕ್ಕಿ ಆತ್ಮಾರ್ಪಣ ದಿಂದಲಾದರೂ ಆ ನಾಗನ ಪ್ರಾಣಗಳನ್ನುಳಿಸಬೇಕೆಂಬ ಸಂಕಲ್ಪವುಂಟಾಯಿತು. ದಿಕ್ಕುತೋರದೆ, ಅಡಿಗಡಿಗೂ ಸಂತಪಿಸಿ, ಕಣ್ಣೀರಿಟ್ಟು ಬಗೆ ಬಗೆಯಾಗಿ ಪ್ರಲಪಿಸುತ್ತ, "ಅಯ್ಯೋ ನನ್ನ ಮಗನನ್ನು ಕಾಪಾಡು ವವರಾರು?" ಎಂದು ದಿಕ್ಕುದಿಕ್ಕುಗಳನ್ನೂ ನಟ್ಟನೆ ನೋಡಿನೋಡಿ ಮೂರ್ಛೆಯೊಂದುತ್ತಿದ್ದ ಆ ವೃದ್ಧಮಾತೆಯನ್ನು ಕಂಡು ಜೀಮೂತ ವಾಹನನು, "ಅಹಹ, ಈ ಸ್ಥಿತಿಯನ್ನು ಕಣ್ಣಾರ ನೋಡಿಯೂ ನಿರ್ಘೃಣ ನಾಗಿ ಕೊಕ್ಕಿನಿಂದ ಈ ನಾಗಕುಮಾರನನ್ನು ಕುಕ್ಕಿ ತಿನ್ನುವ ಗರುತ್ಮಂತನ ಹೃದಯವು ನಿಜವಾಗಿಯೂ ವಜ್ರಕಠಿನವಾಗಿರಬೇಕು" ಎಂದು ಬಿಸು ಸುಯ್ದನು. "ಅಯ್ಯೋ ಮಗನೇ, ಹೇಗೆ ಸಂತಯಿಸಿಕೊಳ್ಳಲಿ, ನನಗಿರುವ ಏಕೈಕ ಪುತ್ರನನ್ನು ಉಳಿಸಿಕೊಡೆಂದು ಅಂಗಲಾಚಿ ಬೇಡಿ ಕೊಂಡರೂ ನಾಗರಾಜನಿಗೆ ಕರುಣೆಹುಟ್ಟಲಿಲ್ಲ" ಎಂದು ಅಳುತ್ತ, ಬೆಂದೊಡಲ ಬೇಗೆಯಿಂದ ನಿರ್ಘೃಣನಾದ ಕೃತಾಂತಹತಕನನ್ನು ನಿಂದಿಸುತ್ತಿದ್ದ ಆ ವೃದ್ಧಮಾತೆಯನ್ನು ಕಂಡು ಜೀಮೂತವಾಹನನಿಗೆ ಅನಿರ್ವಚನೀಯವಾದ ದಯೆಯುಂಟಾಯಿತು. "ಆರ್ತನಾಗಿ, ಕಂಠಗತ ಪ್ರಾಣನಾಗಿ, ಬಂಧುಜನರಿಂದ ಪರಿತ್ಯಕ್ತನಾಗಿರುವ ಈ ನಾಗಕುಮಾರ ನನ್ನು ರಕ್ಷಿಸದಿದ್ದರೆ ನನ್ನ ಶರೀರದಿಂದ ಪ್ರಯೋಜನವೇನು?" ಎಂದು ತನ್ನಲ್ಲಿ ತಾನೇ ನಿಶ್ಚಯಿಸಿಕೊಂಡು ಅವರ ಬಳಿ ಸಾರಿದನು.

ಶಂಖಚೂಡನು ಚಿಂತಾಸಮುದ್ರದಲ್ಲಿ ಮುಳುಗಿದ್ದ ತನ್ನ ತಾಯಿ ಯನ್ನು ಸಂತಯಿಸಿ ಧೈರ್ಯ ಹೇಳುತ್ತಿದ್ದನು. "ಮಗು, ನಾಗ ಲೋಕಾಧಿಪನಾದ ವಾಸುಕಿಯೇ ನಿನ್ನನ್ನು ತೊರೆದನಂತೆ. ಎಂದಮೇಲೆ ಇನ್ನು ನಿನ್ನನ್ನು ಕಾಯುವವರಾರು?" ಎಂದು ಅವಳು ನುಡಿಯುತ್ತಿರು ವಂತೆಯೆ ಜೀಮೂತವಾಹನನು "ರಕ್ಷಿಸುವವನು ನಾನು" ಎಂದು ಹಠಾತ್ತನೆ ಮುಂದೆ ಬಂದನು. ವೃದ್ಧೆಗೆ ಗರುಡನೇ ತನ್ನ ಮಗನನ್ನು ಕೊಂಡುಹೋಗಲು ಬಂದನೆಂಬ ಭಯವಡಸಿತು. ಸೆರಗಿನಿಂದ ಮಗನನ್ನು ಮುಚ್ಚಿ ತಬ್ಬಿಕೊಂಡು ಜೀಮೂತವಾಹನನ ಬಳಿಗೈದಿ, "ವಿನತಾನಂದನ!

ನನ್ನನ್ನು ಕೊಲ್ಲು, ನಿನ್ನ ಆಹಾರಕ್ಕಾಗಿ ನಾಗರಾಜನು ಕಳುಹಿಸಿರುವುದು ನನ್ನನ್ನು'' ಎಂದಳು. ಈ ಮಾತನ್ನು ಕೇಳಿದೊಡನೆಯೆ ಜೀಮೂತ ವಾಹನನಿಗೆ ಕಣ್ಣೀರು ಉಕ್ಕಿ ಹರಿಯಿತು. ಆ ಮಾತೃವಾತ್ಸಲ್ಯಕ್ಕೆ ಅವನ ಹೃದಯವೇ ಕರಗಿ ನೀರಾಯಿತು. ಶಂಖಚೂಡನು, ''ಅಮ್ಮ, ಭಯಪಡಬೇಡ ಈತನು ನಾಗಶತ್ರುವಲ್ಲ. ಕಣ್ತೆರೆದು ನೋಡು, ಮಹಾಹಿಗಳ ಮಸ್ತಕವನ್ನು ಭೇದಿಸಿ, ಹೊರಬಂದ ರಕ್ತದಿಂದ ತೊಯ್ದು ಕೆಂಪೊಗೆದ ಪ್ರಚಂಡವಾದ ಚಂಚೂಪುಟವುಳ್ಳ ಆ ಗರುತ್ಮಂತನೆಲ್ಲಿ? ಗಂಭೀರಾಕೃತಿಯುಳ್ಳವನಾಗಿ, ಸಾಧುವಾಗಿ ತೋರುವ ಈ ಸೌಮ್ಯನೆಲ್ಲಿ'' ಎಂದು ಧೈರ್ಯ ಹೇಳಿದನು. ''ಅಪ್ಪ, ಮರಣಭೀತೆಯಾದ ನಾನು ಜೀವ ಲೋಕವನ್ನೇ ಗರುಡಮಯವನ್ನಾಗಿ ಕಾಣುತ್ತಿರುವೆನು'' ಎಂದು ಹೇಳಿ ವೃದ್ಧೆಯು ಮತ್ತಷ್ಟು ಭೀತಿಗೊಳ್ಳುವುದರಲ್ಲಿರಲು ಜೀಮೂತವಾಹನನು, ''ತಾಯೇ, ಹೆದರಲೇಕೆ? ನಾನು ವಿದ್ಯಾಧರನು. ನಿನ್ನ ಮಗನ ಸಂರಕ್ಷಣೆಗಾಗಿ ಬಂದಿರುವೆನು. ಧೈರ್ಯ ತಂದುಕೊ'' ಎಂದನು. ವೃದ್ಧೆಗೆ ಪರಮಾನಂದವಾಗಿಹೋಯಿತು. ''ಮಗನೇ, ನೀನು ಆಡಿದ ಮಾತು ಗಳನ್ನು ಮತ್ತೊಮ್ಮೆ ಆಡು'' ಎಂದಳು. ಜೀಮೂತವಾಹನನು, ''ತಾಯೆ, ಮತ್ತೆ ಮತ್ತೆ ಹೇಳಿದುದರಿಂದೇನು? ಕಾರ್ಯತಃ ನಾನಾಡಿದ ಮಾತುಗಳನ್ನು ನೆರವೇರಿಸುತ್ತೇನೆ'' ಎನ್ನಲು, ವೃದ್ಧೆಯು ಅವನನ್ನು ಬಾಯಿತುಂಬ ಹರಸಿ, ಸಂತೋಷಪಟ್ಟಳು.

ನಾಗಮಾತೆಯು ಹೀಗೆ ಸಂತುಷ್ಟೆಯಾಗಲು ಜೀಮೂತ ವಾಹನನು, ''ತಾಯೇ, ನಿನ್ನ ಮಗನನ್ನುಳಿಸಲೋಸುಗ ವಿನತಾತ್ಮಜನಿಗೆ ನನ್ನ ದೇಹವನ್ನು ಅರ್ಪಣೆಮಾಡುವೆನು. ವಧ್ಯ ಚಿಹ್ನೆಗಳಾದ ಆ ರಕ್ತ ವಸ್ತ್ರಗಳನ್ನು ನನಗೆ ಕೊಡು'' ಎಂದು ಕೇಳಿದನು. ಅವಳಿಗೆ ಸಿಡಿಲು ಬಡಿದಂತಾಯಿತು. ಆ ಮಾತುಗಳು ಅವಳಿಗೆ ಕರ್ಣಕಠೋರವಾಗಿ ಪರಿಣಮಿಸಿದುವು. ಎರಡೂ ಕಿವಿಗಳನ್ನು ಮುಚ್ಚಿಕೊಂಡು, ''ವತ್ಸ, ಶಂಖಚೂಡನಂತೆಯೆ ನೀನೂ ನನಗೆ ಮಗನೇ, ಅಥವಾ ಮಗನಿಗಿಂತ ಇನ್ನೂ ಹೆಚ್ಚಿನವನು. ನಿನ್ನನ್ನುಳಿದು, ಬಂಧುಜನ ಪರಿತ್ಯಕ್ತನಾದ ಈ ನನ್ನ ಮಗನನ್ನು ರಕ್ಷಿಸಬಯಸುವವನು ಮತ್ತಾವನಿರುವನು''

ಎಂದಳು. ಶಂಖಚೂಡನಾದರೊ ಇಷ್ಟು ಹೊತ್ತೂ ಅವರಿಬ್ಬರ ಸಂಭಾಷಣೆಯನ್ನು ಕೇಳಿ, ಪರಮಾಶ್ಚರ್ಯಭರಿತನಾಗಿ, ಮಹಾಸತ್ವನಾದ ಜೀಮೂತವಾಹನನು ನಿಜವಾಗಿಯೂ ಲೋಕಾತೀತನಾದವನೆಂದು ತಿಳಿದನು. ವಿಶ್ವಾಮಿತ್ರನು ಶ್ವಪಚನಂತೆ ಶ್ವಮಾಂಸವನ್ನು ಭಕ್ಷಿಸಿದ್ದು, ನಾಡೀಜಂಘನು ತನಗೆ ಉಪಕಾರಮಾಡಿದ ಗೌತಮನನ್ನೇ ಕೊಂದದ್ದು, ಕಶ್ಯಪಸುತನಾದ ಗರುಡನು ಪ್ರತಿದಿನವೂ ಉರಗಗಳನ್ನು ತಿನ್ನುತ್ತಿರುವುದು ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳುವುದಕ್ಕೆಂಬುದನ್ನು ಶಂಖಚೂಡನು ತಿಳಿದಿದ್ದನು. ಸಾಧುವಾದ ಜೀಮೂತವಾಹನನು ದಯಾರ್ದ್ರಹೃದಯನಾಗಿ, ಅಂತಹ ಪ್ರಾಣಗಳನ್ನು ಕೇವಲ ತೃಣದಂತೆ ಪರಿಭಾವಿಸಿ, ಪರಾರ್ಥಕ್ಕಾಗಿ ದಾನಮಾಡಲುಜ್ಜುಗಿಸಿರುವುದನ್ನು ಕಂಡು ಅವನು ಬೆರಗಾಗಿಹೋದನು. "ಮಹಾಸತ್ವ! ಆತ್ಮಪ್ರದಾನದ ದೀಕ್ಷೆಯನ್ನು ವಹಿಸಿ ನಿರ್ವ್ಯಾಜವಾದ ದಯೆಯನ್ನು ತೋರಿರುವೆ. ಆದರೆ, ನೀನು ಹಾಗೆ ಮಾಡಕೂಡದು. ನನ್ನಂತಹ ಕ್ಷುದ್ರಜಂತುಗಳು ಹುಟ್ಟುತ್ತವೆ, ಸಾಯುತ್ತವೆ. ಪರಾರ್ಥವನ್ನೇ ಸಾಧಿಸಬೇಕೆಂಬ ಸಂಕಲ್ಪವುಳ್ಳ ನಿನ್ನಂತಹವರು ಹುಟ್ಟುವುದು ಅಪರೂಪ. ಆದುದರಿಂದ ಈ ಮರಣ ಪ್ರಯತ್ನವನ್ನು ಸಾಕುಮಾಡು. ಪ್ರಸನ್ನನಾಗು" ಎಂದು ಜೀಮೂತವಾಹನನನ್ನು ಕೇಳಿಕೊಂಡನು. ಜೀಮೂತವಾಹನನು ಬಹುಕಾಲದಿಂದ ಪರಾರ್ಥಕ್ಕಾಗಿ ತನ್ನ ಶರೀರವನ್ನು ವಿನಿಯೋಗಿಸಬಯಸಿದ್ದ ತನಗೆ ದೊರಕಿರುವ ಆ ಅವಕಾಶಕ್ಕೆ ಅಡ್ಡಿಮಾಡಬೇಡವೆಂದು ಶಂಖಚೂಡನನ್ನು ಒತ್ತಾಯಪಡಿಸಿದನು.

ಶಂಖಚೂಡನು ಪ್ರಸಿದ್ಧವಾದ ಶಂಖಪಾಲವೆಂಬ ನಾಗಕುಲದಲ್ಲಿ ಜನಿಸಿದವನು. ಸ್ವಪ್ರಯೋಜನಕ್ಕಾಗಿ ಪರರ ಹಿಂಸೆಯನ್ನು ಸಹಿಸತಕ್ಕವನಲ್ಲ. ಧೈರ್ಯ ಔದಾರ್ಯ ಗಾಂಭೀರ್ಯಾದಿ ಗುಣಗಳಿಗೆ ಅವನು ನೆಲೆಯಾಗಿದ್ದನು. ಅಂತಹವನು, ತನ್ನ ಪ್ರಾಣವನ್ನು ಕೊಟ್ಟು ಉಪಕಾರಮಾಡುವುದಾಗಿ ನುಡಿದ ಜೀಮೂತವಾಹನನ ಮಾತುಗಳಿಗೆ ಮನಸೋತುದಾದರೆ ತನ್ನ ಕುಲಕ್ಕೂ ತನ್ನ ವ್ಯಕ್ತಿತ್ವಕ್ಕೂ ಕುಂದುಂಟಾಗುವುದೆಂದು ತಿಳಿದನು. "ಮಹಾತ್ಮ! ಶಂಖಚೂಡನು ಪರಿಶುದ್ಧವಾದ

ಶಂಖಪಾಲ ಕುಲವನ್ನು ಮಲಿನಗೊಳಿಸಲು ಬಯಸುವುದಿಲ್ಲ. ನನ್ನಲ್ಲಿ ದಯೆತೋರಬೇಕೆಂದಿದ್ದರೆ, ನನ್ನ ವಿಪತ್ತಿನಿಂದ ದುಃಖಿತೆಯಾಗಿರುವ ಈ ನನ್ನ ತಾಯಿಯು ಜೀವಿತವನ್ನು ತೊರೆಯದಂತೆ ಕಾಪಾಡು" ಎಂದು ಅವನು ಜೀಮೂತವಾಹನನನ್ನು ಬೇಡಿಕೊಂಡನು.

ಜೀಮೂತವಾಹನನು, "ಉಪಾಯವು ಕಂಡುದೇ ಆಗಿದೆ. ಅದು ನಿನ್ನಿಂದಲೇ ನಡೆಯತಕ್ಕದ್ದು. ಯಾವಾಕೆ ನೀನುಳಿದರೆ ಉಳಿದು, ಮಡಿದರೆ ಮಡಿವಳೋ ಆಕೆಗಾಗಿ ನೀನು ನಿನ್ನ ಪ್ರಾಣಗಳನ್ನು ಉಳಿಸಿಕೊಳ್ಳಬೇಕು. ವಧ್ಯಚಿಹ್ನವನ್ನು ಜಾಗ್ರತೆಯಾಗಿ ಕೊಡು. ಅದರಿಂದ ನನ್ನ ಶರೀರವನ್ನು ಮರೆಮಾಡಿಕೊಂಡು ವಧ್ಯಶಿಲೆಯನ್ನೇರುವೆನು" ಎಂದು ಹೇಳಿ, ಸ್ತ್ರೀ ಸ್ವಭಾವ ಕಾತರೆಯಾದ ತಾಯಿಯು ವಧ್ಯಸ್ಥಾನವನ್ನು ಕಂಡೊಡನೆ ಜೀವಿತ ವನ್ನು ತೊರೆಯುವಳೆಂದೂ ಜಾಗ್ರತೆಯಾಗಿ ಆ ಪ್ರದೇಶದಿಂದ ಹೊರಟು ಹೋಗಬೇಕೆಂದೂ ಶಂಖಚೂಡನನ್ನು ತ್ವರೆಗೊಳಿಸಿದನು. ಆದರೆ, ಹೃದಯಕಂಪವನ್ನು ಹುಟ್ಟಿಸುವ ಈ ಮಾತುಗಳಿಂದ ಶಂಖಚೂಡನ ಸ್ಥಿರವಾದ ಮನಸ್ಸು ಎಳ್ಳಷ್ಟೂ ಕದಲಲಿಲ್ಲ. ಅವನು, "ಅಯ್ಯಾ, ಸುಮ್ಮನೆ ಕಾಲಹರಣಮಾಡುವುದರಿಂದೇನು? ಗರುಡನು ಬರುವ ವೇಳೆ ಯಾಯಿತು. ನೀನು ಹೊರಡು" ಎಂದು ಹೇಳಿ, ತಾಯಿಗೆ ಸಾಷ್ಟಾಂಗ ಪ್ರಣಾಮಮಾಡಿ, "ತಾಯೇ, ಇನ್ನು ನೀನು ಹಿಂತಿರುಗು, ಯಾವ ಯಾವ ಜನ್ಮಗಳಲ್ಲಿ ನಾನು ಜನಿಸುವೆನೊ ಆಯಾ ಜನ್ಮಗಳಲ್ಲೆಲ್ಲ ನೀನೇ ನನಗೆ ತಾಯಿಯಾಗು" ಎಂದು ಪ್ರಾರ್ಥಿಸಿದನು. ವೃದ್ಧಮಾತೆಗೆ ವ್ಯಸನ ವಿಮ್ಮಡಿಸಿತು. "ಮಗನೇ, ನಿನ್ನನ್ನು ಬಿಟ್ಟು ಬೇರೊಂದೆಡೆ ಹೋಗಲು ನನಗೆ ಕಾಲೇ ಬಾರವು. ನಾನೂ ನಿನ್ನೊಡನೆಯೇ ಸಾಯುತ್ತೇನೆ" ಎಂದು ಹೇಳಿ ಕಂಬನಿಗರೆದಳು. ಶಂಖಚೂಡನು ಆ ಮಾತನ್ನು ಕಿವಿಗೆ ಹಾಕಿಕೊಳ್ಳದೆ, ಅಲ್ಲಿಗೆ ಉತ್ತರ ದಿಕ್ಕಿನಲ್ಲಿ ಬಹು ಸಮೀಪದಲ್ಲಿರುವ ದಕ್ಷಿಣ ಗೋಕರ್ಣೇಶ್ವರನನ್ನು ಕಂಡು ಪ್ರದಕ್ಷಿಣನಮಸ್ಕಾರಮಾಡಿ, ತನ್ನ ಪ್ರಭುವಿನ ಅಪ್ಪಣೆಯನ್ನು ನಡಸಲು ಸಂಕಲ್ಪಿಸಿ ಅಲ್ಲಿಗೆ ಹೋದನು.

ಈ ಹೊತ್ತಿಗೆ ಸರಿಯಾಗಿ ಮಲಯವತಿಯ ತಾಯಿಯು ಅಳಿಯನಿ ಗೆಂದು ಅಲಂಕಾರಕ್ಕಾಗಿ ಕಳುಹಿಸಿಕೊಟ್ಟ ರಕ್ತಾಂಶುಕಯುಗಳವನ್ನು

ಕಂಚುಕಿಯು ಜೀಮೂತವಾಹನನಿಗೆ ತಂದುಕೊಟ್ಟನು. ತನ್ನ ಉದ್ಯಮವೆಲ್ಲವೂ ನಿಷ್ಫಲವಾಗಿ ಪರೋಪಕಾರಮಾಡುವ ಅವಕಾಶವೇ ಕಳೆದು ಹೋದುದಕ್ಕಾಗಿ ಪರಿತಪಿಸುತ್ತಿದ್ದ ಜೀಮೂತವಾಹನನು ಆ ರಕ್ತಾಂಶುಕ ಯುಗಳವನ್ನು ಕಂಡೊಡನೆ ಅವನ ಆನಂದಕ್ಕೆ ಪಾರವಿಲ್ಲವಾಯಿತು. ಕೂಡಲೆ ಆ ರಕ್ತವಸ್ತ್ರಗಳನ್ನು ಸ್ವೀಕರಿಸಿ, ಕಂಚುಕಿಯನ್ನು ಬೀಳ್ಕೊಟ್ಟನು. ಸಮಯಕ್ಕೆ ಸರಿಯಾಗಿ ಆ ಕೆಂಪುಡೆ ದೊರೆತು ತನ್ನ ಸಂಕಲ್ಪವು ಈಡೇರುವುದಕ್ಕೆ ಸಹಾಯವಾದುದಕ್ಕಾಗಿ ತೃಪ್ತಿಪಟ್ಟುಕೊಂಡು ಅದನ್ನುಟ್ಟು ವಧ್ಯಶಿಲೆಯ ಬಳಿಗೆ ಹೊರಟನು.

ಆ ಹೊತ್ತಿಗೆ ಗರುಡನು ಹಾರಿ ಬರುತ್ತಿರುವ ಸೂಚನೆಗಳು ಕಂಡು ಬಂದುವು. ಮಲಯಾಚಲದ ಶಿಲೆಗಳೆಲ್ಲವೂ ಅವನ ಗಮನ ವೇಗದಿಂದ ಚಲಿಸಿಹೋದುವು. ಪ್ರಳಯಕಾಲವೇ ಸಮನಿಸಿದಂತೆ ಬಳಿಯಲ್ಲಿದ್ದ ಸಾಗರವೇ ಉಲ್ಲೋಲಕಲ್ಲೋಲವಾಗಿಹೋಯಿತು. ಜೀಮೂತವಾಹನನು ತ್ವರೆಗೊಂಡು ವಧ್ಯಶಿಲೆಯನ್ನೇರಿ ಕುಳಿತನು. ಅವನಿಗೆ ಆ ವಧ್ಯಶಿಲೆಯ ಸ್ಪರ್ಶವು ಬಹು ಸುಖಮಯವಾಗಿ ತೋರಿತು. ಆ ವಧ್ಯಶಿಲಾಲಿಂಗನವು ಅವನಿಗೆ ಮಲಯಚಂದನ ರಸದಿಂದ ಆರ್ದ್ರವಾದ ಮಲಯವತಿಯ ಆಲಿಂಗನಕ್ಕಿಂತಲೂ ಮನೋಹ್ಲಾದಕವಾಗಿ ಪರಿಣಮಿಸಿತು. ಅದಕ್ಕೂ ಹೆಚ್ಚಾಗಿ ಶೈಶವದಲ್ಲಿ ತಾಯಮಡಿಲಲ್ಲಿ ನಿರಾತಂಕವಾಗಿ ಮಲಗಿದಾಗಿನ ಸುಖವು ಆ ವಧ್ಯಶಿಲೆಯ ಮಡಿಲಲ್ಲಿ ಅವನಿಗೆ ದೊರೆತಂತೆ ಭಾಸವಾಯಿತು. ಹೀಗೆ ಪರೋಪಕಾರಕ್ಕೆ ಸ್ವಪ್ರಾಣಗಳನ್ನು ಸಮರ್ಪಿಸಲು ಕೃತಸಂಕಲ್ಪನಾಗಿ ಸಂತೋಷ ಸಂಭ್ರಮಗಳನ್ನನುಭವಿಸುತ್ತ ಅವನು ನಿರೀಕ್ಷಿಸುತ್ತಿರುವಂತೆಯೇ ಗರುಡನು ಅಲ್ಲಿಗೆ ಬಂದು, ಮಲಯಪರ್ವತದ ಶಿಖರಕ್ಕೊಯ್ದು ತಿನ್ನಬಯಸಿ ಅವನನ್ನು ಹೊತ್ತುಕೊಂಡುಹೋದನು. ಆ ಸಮಯದಲ್ಲಿ ದೇವದುಂದುಭಿಗಳು ಮೊಳಗಿದುವು. ಪುಷ್ಪವೃಷ್ಟಿಯಾಯಿತು. ಅವನ್ನು ಕೇಳಿ, ಕಂಡು, ಗರುಡನಿಗೆ ಆಶ್ಚರ್ಯವಾದರೂ ಅವು ತನ್ನ ಗಮನವೇಗದಿಂದ ಉಂಟಾಗಿರಬೇಕೆಂದು ನಿಶ್ಚಯಿಸಿ ಶಂಕೆಯನ್ನುಳಿದು ಮಲಯ ಪರ್ವತ ಶಿಖರವನ್ನೇರಿ ಕುಳಿತನು.

ಇತ್ತ ಜೀಮೂತವಾಹನನ ಮನೆಯಲ್ಲಿ ರಾಜಪರಿವಾರದವರೆಲ್ಲರೂ

ಅವನ ಬರವಿಗಾಗಿ ಕಾತರಿಸುತ್ತಿದ್ದರು. ಕಡಲ ಕರೆಯ ಚೆಲುವನ್ನು ನೋಡಿ ನಲಿಯಲು ತೆರಳಿದ್ದ ಅವನು ಇನ್ನೂ ಬಾರಲಿಲ್ಲವೇಕೆಂದು ನವೋಢೆಯಾದ ಮಲಯವತಿಗೂ ಅವನ ತಾಯಿತಂದೆಗಳಿಗೂ ಕಳವಳವಾಯಿತು. ವಿದ್ಯಾಧರ ಚಕ್ರವರ್ತಿಯಾದ ಅವನು ಆಶ್ರಮದ ಉಪವನಗಳಲ್ಲಿ ಸಂಚರಿಸುತ್ತಿದ್ದರೂ ಪುತ್ರವ್ಯಾಮೋಹದಿಂದ ಅವನ ತಂದೆ ಜೀಮೂತಕೇತುವು ವಿಪತ್ತನ್ನು ಆಶಂಕಿಸುತ್ತಿದ್ದನು. ಈಗ ಒಬ್ಬೊಂಟಿಗನಾಗಿ ಹೊರಟುಹೋಗಿರುವುದನ್ನು ನೆನೆದು ಅವನ ಮನಸ್ಸು ಬಹಳ ತಲ್ಲಣಿಸಿ ಹೋಯಿತು. ಕೂಡಲೆ ಅವನು ಜೀಮೂತವಾಹನನನ್ನು ಹುಡುಕಿ ಕರೆದುತರಲು ದೂತರನ್ನಟ್ಟಿದನು. ಈ ಮಧ್ಯದಲ್ಲಿ ಕೆಲವು ದುಶ್ಶಕುನಗಳು ತಲೆದೋರಿ, ಅನಿಷ್ಟಶಂಕೆಯಿಂದ ಅವನ ಮನಸ್ಸು ಮತ್ತಷ್ಟು ವ್ಯಾಕುಲವಾಯಿತು. "ಯೌವನ ಸುಖಗಳೆಲ್ಲವನ್ನೂ ಪಡೆದುದಾಯಿತು, ಕೀರ್ತಿಗಳಿಸಿದೆನು. ರಾಜ್ಯಾಡಳಿತವು ಒಂದು ನೆಲೆಗೆ ಬಂದಿತು. ವಾನಪ್ರಸ್ಥಾಶ್ರಮಿಯಾಗಿ ಅನುತ್ತಮವಾದ ತಪಸ್ಸನ್ನು ಮಾಡಿದ್ದಾಯಿತು. ವಂಶಕ್ಕೂ ನನಗೂ ಸದೃಶನಾದ ಮಗನೂ, ಅವನಿಗೆ ಅನುರೂಪಳಾದ ಹೆಂಡತಿಯೂ ಆನಂದವಾಗಿರುವಾಗಲೇ ನಾನು ಮಡಿದರೆ ನನ್ನಷ್ಟು ಧನ್ಯನು ಯಾರೂ ಇಲ್ಲ" ಎಂದು ಅವನು ಯೋಚಿಸುತ್ತಿರುವಷ್ಟರಲ್ಲಿಯೆ ಪ್ರತೀಹಾರಿಯೊಬ್ಬನು ಬಂದು, ಜೀಮೂತವಾಹನನು ಇನ್ನೂ ಅರಮನೆಗೆ ಬರಲಿಲ್ಲವೆಂಬ ಸುದ್ದಿಯನ್ನು ತಿಳಿಸಿದನು. ಅಲ್ಲಿಯೇ ಇದ್ದ ಮಲಯವತಿಗೆ ಇದನ್ನು ಕೇಳಿ ಸಿಡಿಲುಬಡಿದಂತಾಯಿತು. ಜೀಮೂತಕೇತುವಿಗೂ ಎಡಗಣ್ಣದುರಿ ಮನಸ್ಸು ಪರ್ಯಾಕುಲವಾಗಿಹೋಯಿತು. ಆ ಹೊತ್ತಿಗೆ ಸರಿಯಾಗಿ ರಕ್ತಮಾಂಸಗಳು ಅಂಟಿಕೊಂಡಿದ್ದ ಅನರ್ಘ್ಯರತ್ನವೊಂದು ಮೇಲಿನಿಂದ ಜೀಮೂತಕೇತುವಿನ ಪಾದಗಳ ಬಳಿ ಬಂದು ಬಿದ್ದಿತು. ಅದು ಜೀಮೂತವಾಹನನು ಧರಿಸುತ್ತಿದ್ದ ರತ್ನವಾಗಿದ್ದಿತು. ಅವನ ತಾಯಿಯು ಅದನ್ನು ಗುರುತಿಸಿ ದುಃಖಿಸಿದಳು. ಅಲ್ಲಿಗೆ ಬಂದಿದ್ದ ಪ್ರತೀಹಾರಿಯು, "ಮಹಾರಾಜ, ತಿಳಿಯದೆ ಎಲ್ಲರೂ ಹೀಗೆ ತಲ್ಲಣಿಸುವುದು ಸರಿಯಲ್ಲ. ಈ ಪ್ರದೇಶದಲ್ಲಿ ಗರುಡನು ನಾಗಗಳನ್ನು ಭಕ್ಷಿಸುವಾಗ, ಅವುಗಳ ಫಣಾರತ್ನಗಳು ಹೀಗೆ ಒಮ್ಮೊಮ್ಮೆ ಬೀಳುವುದುಂಟು.

ಇದು ಅದೇ ಇದ್ದೀತು" ಎಂದುದನ್ನು ಕೇಳಿ ಜೀಮೂತಕೇತುವು ಇರಬಹುದೇ ಎಂದು ಸಂಶಯಪಡುತ್ತಿರುವಲ್ಲಿ ಶಂಖಚೂಡನು ಅಲ್ಲಿಗೆ ಬಂದನು.

ಕಡಲತಡಿಯಲ್ಲಿ ಗೋಕರ್ಣೇಶ್ವರನನ್ನು ಸಂದರ್ಶಿಸಿ ಪೂಜಿಸಿ, ಗರುಡನಿಗೆ ತನ್ನನ್ನು ಒಪ್ಪಿಸಿಕೊಳ್ಳಲು ಅವನು ಹಿಂತಿರುಗಿ ಬರುತ್ತಿರಲು ಗರುಡನು ಜೀಮೂತವಾಹನನನ್ನು ಕೊಂಡುಹೋದುದನ್ನು ಕಂಡಿದ್ದ ಅವನು ಆಗಬಾರದ್ದಾಯಿತೆಂದು ಚಿಂತಿಸಿ, ತನ್ನನ್ನು ತಾನೇ ನಿಂದಿಸಿ ಕೊಳ್ಳುತ್ತಿದ್ದನು. ದುಃಖವಿಮ್ಮಡಿಸಿ ಪ್ರಲಪಿಸುತ್ತಿದ್ದನು. ಜೀಮೂತ ವಾಹನನ ತಾಯಿಯು ಅವನ ಪ್ರಲಾಪವನ್ನು ಕೇಳಿ, ದೀನವದನನಾದ ಅವನನ್ನು ಕಂಡು, ಯಾರಿರಬಹುದೆಂದು ಶಂಕಿಸಿದಳು. ಜೀಮೂತ ಕೇತುವು ಅವನೇ ರತ್ನವನ್ನು ಕಳೆದುಕೊಂಡಿದ್ದವನಿರಬಹುದೆಂದು ಊಹಿಸಿ ದನು. "ತ್ರಿಭುವನೈಕಚೂಡಾಮಣಿ, ಪರಾರ್ಥದತ್ತದೇಹಿ, ಇನ್ನು ನಿನ್ನನ್ನು ಕಾಣುವುದೆಲ್ಲಿ? ಅಯ್ಯೋ, ಮೋಸವಾಯಿತು" ಎಂದು ಪ್ರಲಪಿಸುತ್ತಿರುವ ಶಂಖಚೂಡನ ಪ್ರಲಾಪವನ್ನು ಕೇಳಿ ಜೀಮೂತ ಕೇತುವು ಅವನ ಬಳಿ ಸಾರಿ, "ವತ್ಸ, ನಿನ್ನ ಚೂಡಾಮಣಿಯು ಕಳುವಾಗಿದೆಯೆ?" ಎಂದು ಕೇಳಿದನು. ಅದಕ್ಕೆ ಅವನು, "ಆರ್ಯ, ಆ ರತ್ನವು ನನ್ನೊಬ್ಬನದೇ ಅಲ್ಲ, ತ್ರಿಭುವನಗಳದು" ಎಂದು ಕಣ್ಣೀರಿಟ್ಟನು. ಜೀಮೂತಕೇತುವಿಗೆ ಕಳವಳವು ಹೆಚ್ಚಿತು. ಸ್ಪಷ್ಟವಾಗಿ ವಿಷಯವನ್ನು ತಿಳಿಸಬೇಕೆಂದು ಅವನನ್ನು ಕೇಳಿಕೊಂಡನು. ಹೇಳುವುದಕ್ಕೆ ಮನಸ್ಸೇ ಬಾರದೆ ಕಂಬನಿಗರೆಯುತ್ತ ನಿಂತಿದ್ದ ಶಂಖಚೂಡನನ್ನು ಜೀಮೂತ ಕೇತುವು ಮತ್ತೆಮತ್ತೆ ಬಲಾತ್ಕಾರಪಡಿಸಿದನು. ನಿರ್ವಾಹವಿಲ್ಲದೆ ಅವನು ತಾನೊಬ್ಬ ನಾಗನೆಂದೂ, ಗರುಡನಿಗೆ ಆಹಾರಾರ್ಥವಾಗಿ ವಾಸುಕಿಯು ತನ್ನನ್ನು ಕಳುಹಿಸಿದನೆಂದೂ, ಅದಕ್ಕಾಗಿ ತಾನು ಹೋಗುತ್ತಿರಲು ಯಾವನೋ ವಿದ್ಯಾಧರನೊಬ್ಬನು ಅನುಕಂಪೆಯಿಂದ ತನ್ನ ಪ್ರಾಣಗಳನ್ನು ಗರುತ್ಮಂತನಿಗೆ ಒಪ್ಪಿಸಿ ತನ್ನನ್ನು ಸಂರಕ್ಷಿಸಿದನೆಂದೂ ಹೇಳಿಬಿಟ್ಟನು.

ಜೀಮೂತವಾಹನನನ್ನುಳಿದು ಮತ್ತಾವನೂ ಅಂತಹ ವೀರ ದಾನವನ್ನು ಮಾಡುವುದಿಲ್ಲವೆಂಬುದು ಜೀಮೂತಕೇತುವಿಗೆ ಚೆನ್ನಾಗಿ

ಗೊತ್ತಿದ್ದಿತು. ಇತರರ ಹಿತಸಾಧನೆಯೇ ಮುಖ್ಯವಾದ ಗುರಿಯಾಗಿ ಉಳ್ಳ ಅವನೇ ಆ ಕಾರ್ಯವನ್ನು ಮಾಡಿರಬೇಕೆಂದು ನಿರ್ಧರಿಸಿ ವಾರ್ಧಕ್ಯ ದಿಂದ ಮೊದಲೇ ಜರ್ಝರಿತ ದೇಹವುಳ್ಳ ಜೀಮೂತಕೇತುವು ತನ್ನ ದುರದೃಷ್ಟಕ್ಕಾಗಿ ಕಂದಿಹೋದನು. ಅವನ ಪತ್ನಿಯೂ ಜೀಮೂತ ವಾಹನನ ಪ್ರಿಯತಮೆಯೂ ಅಶುಭವನ್ನು ಶಂಕಿಸಿ ದುಃಖಭರವನ್ನು ತಾಳಲಾರದೆ ಮೂರ್ಛೆಗೊಂಡರು. ಶಂಖಚೂಡನಾದರೋ ಅವರ ಅವಸ್ಥೆಯನ್ನು ಕಣ್ಣಾರ ಕಂಡು, ಆ ವೃದ್ಧ ದಂಪತಿಗಳೇ ಜೀಮೂತ ವಾಹನನ ಮಾತಾಪಿತೃಗಳಾಗಿರಬೇಕೆಂದು ನಿಶ್ಚಯಿಸಿ, ತನ್ನಿಂದಲೆ ಅವರು ಆ ಸ್ಥಿತಿಗೆ ಬಂದರೆಂದು ವಿಷಾದಿಸಿ, "ವಿಷಧರನ ವದನದಿಂದ ವಿಷವಲ್ಲದೆ ಮತ್ತೇನುತಾನೇ ಹೊರಬಂದೀತು" ಎಂದು ತನ್ನನ್ನು ತಾನೇ ಹಳಿದುಕೊಂಡನು. ದುಃಖವನ್ನು ತನ್ನಲ್ಲಿಯೇ ಅಡಗಿಸಿಕೊಂಡ ಅವನು ದುಸ್ಸಹವಾದ ದುಃಖ ಸಮುದ್ರದಲ್ಲಿ ಮುಳುಗಿರುವ ಆ ವೃದ್ಧ ದಂಪತಿಗಳನ್ನು ಸಮಾಧಾನಗೊಳಿಸಲು ಪ್ರಯತ್ನಿಸಿದನು. ಜೀಮೂತ ಕೇತುವು, "ಗುರುಚರಣ ಶುಶ್ರೂಷಾಭಿಜ್ಞ! ಲೋಕಾಂತರವನ್ನೈದಿ ದರೂ ವಿನಯಕ್ರಮವನ್ನು ಮರೆಯದೆ ಈ ಚೂಡಾಮಣಿಯನ್ನು ನನ್ನ ಅಡಿಗಳಿಗೆ ಬೀಳಿಸಿವೆಯಲ್ಲವೆ" ಎಂದು ಕಂಬನಿಗರೆಯುತ್ತಿರಲು, ವೃದ್ಧ ಮಾತೆಯು "ಅಯ್ಯೋ ಮಗನೇ! ನಿನಗೆ ಗುರುಜನ ಶುಶ್ರೂಷೆಯೆ ಪರಮಸುಖವಾಗಿ ರುಚಿಸುವಂತಹದಲ್ಲವೆ? ನೀನು ತಂದೆಯನ್ನುಳಿದ ಸ್ವರ್ಗಸುಖವನ್ನನುಭವಿಸಲು ಹೇಗೆ ತಾನೇ ಹೊರಟುಹೋದೆ?" ಎಂದ ರೋದಿಸುತ್ತಿರಲು, ಮಲಯವತಿಯೂ "ತಾತ, ಈ ಆರ್ಯಪುತ್ರನ ಅಂಗಾಭರಣ ಚಿಹ್ನವಾದ ಈ ಚೂಡಾರತ್ನವನ್ನು ನನಗೆ ದಯಪಾಲಿಸಿರಿ ಇದನ್ನಪ್ಪಿಕೊಂಡು ಅಗ್ನಿಯನ್ನು ಹೊಕ್ಕು ಈ ಸಂತಾಪ ದುಃಖವನ್ನು ಪರಿಹರಿಸಿಕೊಳ್ಳುವೆನು" ಎಂದು ಪ್ರಲಪಿಸಿದಳು.

ಜೀಮೂತಕೇತುವು ಎಲ್ಲರೂ ಅಗ್ನಿಪ್ರವೇಶ ಮಾಡುವುದೇ ಸರಿ ಯೆಂದು ನಿರ್ಧರಿಸಿಕೊಂಡು ಅಗ್ನಿಹೋತ್ರವನ್ನು ಪುರಸ್ಕರಿಸಿ ಹೊರಡಲನು ವಾದನು. "ಅಯ್ಯೋ ಕಷ್ಟ, ಪಾಪಿಷ್ಠನಾದ ನನ್ನೊಬ್ಬನ ದೆಸೆಯಿಂದ ಒಟ್ಟಿ ವಿದ್ಯಾಧರ ಕುಲವೇ ಛಿನ್ನವಾಗಿಹೋಯಿತು" ಎಂದು

ಶಂಖಚೂಡನು ಮರುಗಿ, "ತಾತ, ಯಾವುದನ್ನೂ ಸರಿಯಾಗಿ ನಿಶ್ಚಯಿಸದೆ ಇಂತಹ ಸಾಹಸವನ್ನು ಮಾಡುವುದು ಯುಕ್ತವಲ್ಲ. ವಿಧಿ ವಿಲಾಸವು ಬಹು ವಿಚಿತ್ರವಾದುದು. ಒಂದುವೇಳೆ ನಾಗಶತ್ರುವಾದ ಆ ವೈನತೇಯನು ತಾನು ಹೊತ್ತು ತಂದಿರುವುದು ನಾಗನನ್ನಲ್ಲವೆಂದು ಆ ಮಹಾತ್ಮನನ್ನು ತೊರೆದರೂ ತೊರೆಯಬಹುದು. ಆದುದರಿಂದ ಎಲ್ಲರೂ ಈ ರಕ್ತಧಾರೆಯನ್ನೇ ಅನುಸರಿಸಿ ಹೋಗೋಣ ಬನ್ನಿರಿ" ಎಂದು ಎಲ್ಲರನ್ನೂ ಸಮಾಧಾನಗೊಳಿಸಿ, ಮಲಯಪರ್ವತದ ಬಳಿಗೆ ಕರೆದೊಯ್ದನು.

ಇತ್ತ ಮಲಯ ಪರ್ವತದ ಶಿಖರದಲ್ಲಿ ಜೀಮೂತವಾಹನನನ್ನು ಹೊತ್ತುತಂದು ಗರುಡನು ಅವನನ್ನು ತಿನ್ನುವುದರಲ್ಲಿದ್ದನು. ಹುಟ್ಟಿದಂದಿನಿಂದಲೂ ಅಸಂಖ್ಯಾತವಾದ ನಾಗಗಳನ್ನು ಭುಜಿಸಿ ತಣಿಯುತ್ತಿದ್ದ ಅವನಿಗೆ ಅಂದು ಪರಮಾಶ್ಚರ್ಯವಾಯಿತು. ನಾಗಗಳನ್ನು ಹಿಡಿದು ತಂದೊಡನೆ ಅವು ಭಯದಿಂದ ನಡುಗಿ, ವ್ಯಥೆಯಿಂದ ಮೂರ್ಛೆಯೊಂದುತ್ತಿದ್ದುವು. ಈಗ ತಾನು ಹಿಡಿದು ತಂದಿರುವ ಮಹಾಸತ್ವನಾದರೋ ನಿರ್ಭೀತನಾಗಿರುವುದು ಮಾತ್ರವಲ್ಲದೆ ಏನೊಂದೂ ವ್ಯಥೆಯಿಲ್ಲದೆ ಅತ್ಯಂತ ಆನಂದಭರಿತನಾಗಿರುವನು. ರಕ್ತವನ್ನು ಹೀರುತ್ತಿದ್ದರೂ ಅವನಲ್ಲಿ ಯಾವ ಮುಖವಿಕಾರಗಳೂ ಕಂಡುಬರುತ್ತಿರಲಿಲ್ಲ. ಮಾಂಸ ಖಂಡಗಳನ್ನು ಕಿತ್ತೆಳೆಯುತ್ತಿದ್ದರೂ ಮುಖವು ಪ್ರಸನ್ನವಾಗಿಯೇ ಇದೆ. ಆನಂದಾತಿಶಯದಿಂದ ಉಂಟಾದ ರೋಮಾಂಚವು ಅಂತೆಯೇ ಸ್ಥಿರವಾಗಿರುವುದು. ಅಪಕಾರವನ್ನೆಸಗುತ್ತಿರುವ ತನ್ನನ್ನು ಉಪಕಾರ ಬುದ್ಧಿಯಿಂದ ನೋಡುತ್ತಿರುವನು. ಅವನ ಧೈರ್ಯ ಸ್ಥೈರ್ಯಗಳನ್ನು ಕಂಡು, "ಇರಲಿ, ಇವನನ್ನು ನಾನು ಭಕ್ಷಿಸುವುದಿಲ್ಲ. ಇವನಾರೆಂಬುದನ್ನು ಕೇಳುವೆನು" ಎಂದು ಸಂಕಲ್ಪಿಸಿ ಗರುಡನು ತಿನ್ನುವುದನ್ನು ಬಿಟ್ಟು ಸುಮ್ಮನಾದನು.

ಜೀಮೂತವಾಹನನಿಗೆ ಅತ್ಯಾಶ್ಚರ್ಯವಾಯಿತು. ನರಗಳಿಂದ ಇನ್ನೂ ರಕ್ತ ಹರಿಯುತ್ತಲೇ ಇದೆ; ದೇಹದಲ್ಲಿ ಮಾಂಸವು ಮುಗಿದು ಹೋಗಲಿಲ್ಲ; ಭಕ್ಷಿಸುತ್ತಿದ್ದ ಗರುತ್ಮಂತನಿಗೂ ತೃಪ್ತಿಯಾದಂತೆ

ಕಾಣಲಿಲ್ಲ. ಸಂಶಯಗ್ರಸ್ತನಾಗಿ, "ಮಹಾತ್ಮ, ತಿನ್ನುವುದನ್ನೇಕೆ ಬಿಟ್ಟೆ?" ಎಂದು ಅವನನ್ನು ಕೇಳಿದನು. ಗರುಡನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯವಾಯಿತು. ಅಂಥ ಅವಸ್ಥೆಯಲ್ಲಿಯೂ ಆ ಮಹಾತ್ಮನ ಗಂಭೀರ ವಾಣಿಯನ್ನು ಕೇಳಿ ಬೆರಗಾಗಿಹೋದನು. "ಅಯ್ಯಾ, ಮಹಾಸತ್ವನೆ! ನೀನಾರೆಂಬುದನ್ನು ಕೇಳಲಪೇಕ್ಷಿಸುವೆನು. ನಾನು ನಿನ್ನ ಹೃದಯದಿಂದ ಶೋಣಿತವನ್ನೆಲ್ಲ ಸೆಳೆದುಬಿಟ್ಟಿರುವೆನು. ಆದರೆ ನಿನ್ನ ಈ ಧೈರ್ಯದಿಂದ ನನ್ನಹೃದಯವನ್ನೇ ನೀನು ಸೂರೆಗೊಂಡಿರುವೆ. ನೀನಾರೆಂಬುವನ್ನು ದಯವಿಟ್ಟು ತಿಳಿಸು" ಎಂದು ಪ್ರಾರ್ಥಿಸಿದನು. ಜೀಮೂತವಾಹನನು "ಹಸಿವಿನಿಂದ ಬಳಲುತ್ತಿರುವ ನೀನು ಶ್ರವಣ ಯೋಗ್ಯನಲ್ಲ. ಮೊದಲು ನನ್ನ ಮಾಂಸಶೋಣಿತಗಳಿಂದ ತೃಪ್ತಿ ಹೊಂದು" ಎಂದನು.

ಗರುಡನೂ ಜೀಮೂತವಾಹನನೂ ಹೀಗೆ ಸಲ್ಲಪಿಸುತ್ತಿರುವಂತೆಯೆ ನಾಗಕುಮಾರನಾದ ಶಂಖಚೂಡನು ಸಂಭ್ರಮಸಹಿತನಾಗಿ ಅವನ ಬಳಿಗೈದಿ, "ತಾರ್ಕ್ಷ್ಯ, ಇಂತಹ ಸಾಹಸವನ್ನು ಮಾಡಬೇಡ. ಇವನು ನಾಗನಲ್ಲ. ಇವನನ್ನು ತೊರೆ. ನನ್ನನ್ನು ಭಕ್ಷಿಸು. ವಾಸುಕಿಯು ನಿನ್ನ ಆಹಾರಾರ್ಥವಾಗಿ ಕಳುಹಿಸಿರುವುದು ನನ್ನನ್ನೇ" ಎಂದು ಮೊರೆಯಿಟ್ಟು ಕೂಗುತ್ತ ತನ್ನ ವಕ್ಷಸ್ಥಲವನ್ನು ಮುನ್ನೀಡಿದನು. ಜೀಮೂತವಾಹನನಿಗೆ ಶಂಖಚೂಡನು ಬಂದುದರಿಂದ ತನ್ನ ಮನೋ ರಥವು ವಿಫಲವಾದುದಕ್ಕಾಗಿ ದುಃಖವಡಿಸಿತು. ಗರುಡನಾದರೋ ಇಬ್ಬರನ್ನೂ ನಿರುಕಿಸಿ ಇಬ್ಬರಿಗೂ ವಧ್ಯಚಿಹ್ನೆಯಿರುವುದನ್ನು ಕಂಡು, ಅವರಿಬ್ಬರಲ್ಲಿ ನಾಗನಾರೆಂಬುದನ್ನು ಅರಿಯದೆಹೋದನು. ಆಗ ಶಂಖ ಚೂಡನೇ, ತನ್ನ ಮೈಯಲ್ಲಿರುವ ಸ್ವಸ್ತಿಕ ಚಿಹ್ನೆಯನ್ನೂ ತಾನು ಮಾತ ನಾಡುವಾಗ ಹೊರಬಿದ್ದ ಜಿಹ್ವಾದ್ವಯವನ್ನೂ ಹೆಡೆಗಳನ್ನೂ ಹೆಡೆಮಣಿ ಗಳನ್ನೂ ನೋಡಿಯಾದರೂ ತಾನೇ ನಾಗನೆಂದು ತಿಳಿಯಬಾರದೇಕೆಂದು ಗರುಡನನ್ನು ಕೇಳಿಕೊಂಡನು.

ಗರುಡನಿಗೆ ನಾಗನಾರೆಂಬುದರ ಅರಿವಾಯಿತು. ತಾನು ಭಕ್ಷಿಸು ತ್ತಿರುವ ಮಹಾತ್ಮನಾರೆಂಬುದು ಅವನಿಗೆ ತಿಳಿಯಲಿಲ್ಲ. ಶಂಖಚೂಡನು

ಅವನೇ ವಿದ್ಯಾಧರವಂಶತಿಲಕನಾದ ಜೀಮೂತವಾಹನನೆಂದೂ ಪರಮ ಕಾರುಣಿಕನಾದ ಅವನನ್ನು ಗರುಡನು ಅಜ್ಞಾನದಿಂದ ಭಕ್ಷಿಸುತ್ತಿರುವನೆಂದೂ ಹೇಳಿದಮೇಲೆ ಆ ಪಕ್ಷಿರಾಜನಿಗೆ ಪಾಪಶಂಕೆಯುಂಟಾಯಿತು. ಮೇರುಪರ್ವತದಲ್ಲಿ, ಮಂದರಕಂದರಗಳಲ್ಲಿ, ಹಿಮಗಿರಿಯ ತಪ್ಪಲುಗಳಲ್ಲಿ, ಮಹೇಂದ್ರ ಕೈಲಾಸ ಪರ್ವತಗಳ ಶಿಲಾತಲಗಳಲ್ಲಿ, ಮಲಯ ಪರ್ವತಗಳ ಶಿಖರಗಳಲ್ಲಿ, ದಿಗಂತಗಳಲ್ಲಿ, ಲೋಕಾಲೋಕ ಸಂಚಾರ ಚತುರರಾದ ಚಾರಣರು ಗಾನಮಾಡಿ ಯಾರ ಯಶಸ್ಸನ್ನು ಕೀರ್ತಿಸುತ್ತಿದ್ದುದನ್ನು ತಾನು ಕೇಳಿದ್ದನೋ ಆ ವಿದ್ಯಾಧರ ಕುಮಾರನಾದ ಜೀಮೂತವಾಹನನನ್ನು ಹಿಂಸಿಸಿದುದಕ್ಕಾಗಿ ಗರುಡನಿಗೆ ಉಂಟಾದ ದುಃಖಕ್ಕೆ ಎಣೆಯೇ ಇಲ್ಲವಾಯಿತು. ಕರುಣಾರ್ದ್ರ ಚಿತ್ತನಾಗಿ ತನ್ನ ಗ್ರಾಸಕ್ಕಾಗಿ ಬಂದಿದ್ದ ನಾಗನ ಪ್ರಾಣಗಳನ್ನು ಸಂರಕ್ಷಿಸಲೋಸುಗ ಸ್ವದೇಹವನ್ನೇ ತನ್ನ ಆಹಾರಾರ್ಥವಾಗಿ ಒಪ್ಪಿಸಿದ ಆ ಮಹಾತ್ಮನು ನಿಜವಾಗಿ ಬೋಧಿಸತ್ವನೆಂದೇ ಅವನಿಗೆ ಭಾಸವಾಯಿತು. ಅಂತಹವನನ್ನು ತಾನು ಘಾತಿಸಿದುದಕ್ಕಾಗಿ ಅವನಲ್ಲಿ ಹುಟ್ಟಿದ ಪಶ್ಚಾತ್ತಾಪವು ನೂರುಮಡಿಯಾಗಿ ಹೆಚ್ಚಿ ಅಗ್ನಿಪ್ರವೇಶ ಮಾಡುವುದೇ ಅದಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ನಿರ್ಧರಿಸಿದನು.

ಆ ಹೊತ್ತಿಗೆ ಸರಿಯಾಗಿ ಜೀಮೂತಕೇತುವು ಪರಿವಾರಸಹಿತನಾಗಿ ಅಗ್ನಿಯನ್ನು ಪುರಸ್ಕರಿಸಿಕೊಂಡು ಅಲ್ಲಿಗೆ ಬಂದನು. ಶಂಖಚೂಡನು ಅವರು ಬರುತ್ತಿರುವ ಸುದ್ದಿಯನ್ನು ಜೀಮೂತವಾಹನನಿಗೆ ಅರಿಕೆ ಮಾಡಿದನು. ಜೀಮೂತವಾಹನನಿಗೆ ತನ್ನ ಆಗಿನ ಸ್ಥಿತಿಯನ್ನು ತಾಯಿ ತಂದೆಗಳು ನೋಡುವುದು ಸಹ್ಯವಾಗಲಿಲ್ಲ. ಉತ್ತರೀಯದಿಂದ ತನ್ನ ಶರೀರವನ್ನು ಮುಚ್ಚಬೇಕೆಂದು ಶಂಖಚೂಡನನ್ನು ಕೇಳಿಕೊಂಡನು. ಶಂಖಚೂಡನು ಸಮೀಪದಲ್ಲಿಯೇ ಬಿದ್ದಿದ್ದ ಉತ್ತರೀಯವನ್ನು ಅವನಿಗೆ ಹೊದಿಸಿದನು. ಜೀಮೂತಕೇತುವು ಪತ್ನೀ ವಧೂಸಮೇತನಾಗಿ ಅಲ್ಲಿಗೆ ಬಂದು ಕಂಬನಿಗರೆಯುತ್ತ, "ಮಗು, ಜೀಮೂತವಾಹನ, ಒಬ್ಬ ನಾಗನನ್ನು ಸಂರಕ್ಷಿಸಬಯಸಿದ ನೀನು, ನಿನ್ನ ತಾಯಿತಂದೆಗಳು ನಿನ್ನ ಪ್ರಿಯ ಪತ್ನಿ, ಹೆಚ್ಚೇಕೆ, ಒಟ್ಟಾಗಿ ನಿನ್ನ ಕುಲವೇ ಅಳಿದುದನ್ನೇಕೆ

ನೋಡಲಿಲ್ಲ ?" ಎಂದು ಹೇಳುತ್ತ ದುಃಖಿಸಿದನು. ಮಲಯವತಿಯ ದುಃಖವಂತೂ ಮೇರೆ ಮೀರಿದುದಾಗಿದ್ದಿತು. ವೃದ್ಧ ಮಾತೆಯಾದರೋ ಪುತ್ರಶೋಕವನ್ನು ಅಡಗಿಸಿಕೊಳ್ಳಲಾರದೆ ತಲ್ಲಣಿಸಿಹೋಗಿದ್ದಳು.

ಗರುಡನು ಹೃದಯ ವಿದ್ರಾವಕವಾದ ಆ ಸನ್ನಿವೇಶವನ್ನು ನೋಡಿ, ಅವರು ತಂದಿದ್ದ ಅಗ್ನಿಯಲ್ಲಿಯೇ ಬಿದ್ದು ಪ್ರಾಣಗಳನ್ನು ಕಳೆದುಕೊಳ್ಳಬೇಕೆಂದು ಬಯಸಿದ್ದವನು ಅವರಿಗೆ ತನ್ನ ಮುಖವನ್ನು ತೋರಿಸಲು ನಾಚಿ, ಸಮೀಪದಲ್ಲಿಯೇ ಇದ್ದ ಸಾಗರದ ಬಡಬಾಗ್ನಿಯನ್ನು ತನ್ನ ಪಕ್ಷಮಾರುತದಿಂದ ಕೆರಳಿಸಿ ಅದರಲ್ಲಿ ಬೀಳಬಯಸಿದನು. ಜೀಮೂತವಾಹನನು ಅವನ ಉದ್ಯಮವನ್ನು ಕಂಡು, "ಪಕ್ಷಿರಾಜ, ಈ ಉದ್ಯಮವನ್ನು ಸಾಕುಮಾಡು. ನೀನು ಮಾಡಿರುವ ಪಾಪಕ್ಕೆ ಇದು ಪ್ರತೀಕಾರವಲ್ಲ" ಎಂದನು. ಒಂದು ಕ್ಷಣಕಾಲ ನಿರೀಕ್ಷಿಸಬೇಕೆಂದೂ ಅಷ್ಟರಲ್ಲಿ ತಾನು ತಾಯಿತಂದೆಗಳಿಗೆ ನಮಸ್ಕರಿಸಿ ಬರುವನೆಂದೂ ಆಮೇಲೆ ಪ್ರತೀಕಾರವಾವುದೆಂಬುದನ್ನು ತಿಳಿಸುವುದಾಗಿಯೂ ಹೇಳಿದನು. ಗರುಡನಿಗೆ ಸ್ವಲ್ಪ ಸಮಾಧಾನವಾಯಿತು.

ಜೀಮೂತವಾಹನನು ಬಹು ಕಷ್ಟದಿಂದ ತನ್ನ ಯಾತನೆಯನ್ನೆಲ್ಲ ಸಹಿಸಿಕೊಂಡು, ತಾಯಿತಂದೆಗಳ ಬಳಿ ಸಾರಿದನು. ಅವರಿಗೆ ನಮಸ್ಕಾರ ಮಾಡುವಷ್ಟರಲ್ಲಿಯೇ, ದುರ್ಬಲನಾಗಿದ್ದ ಅವನನ್ನು ಮೂರ್ಛೆಯು ತೊಂದರೆಪಡಿಸಿತು. ಉತ್ತರೀಯವು ಸರಿದುಹೋಗಿ ನೆಲಕ್ಕೆ ಬಿದ್ದನು. ಶಂಖಚೂಡನು ಅವನನ್ನು ಸಂತಯಿಸಿದನು. ಜೀಮೂತಕೇತುವೂ ವೃದ್ಧೆಯೂ ಮಲಯವತಿಯೂ ಶೋಕಪೀಡಿತರಾಗಿ, ಆ ಭೀಕರ ದೃಶ್ಯದಿಂದ ದಿಗ್ಭ್ರಾಂತರಾಗಿ ಮೂರ್ಛೆಗೊಂಡರು.

ಗರುಡನು ಹೃದಯ ವಿದ್ರಾವಕವಾದ ಆ ವಿದ್ಯಾಧರ ಕುಟುಂಬದ ಪರಿಸ್ಥಿತಿಯನ್ನು ಕಂಡು ದುಃಖಾವೇಗದಿಂದ ತನ್ನನ್ನು ತಾನೇ ಹಳಿದುಕೊಂಡನು. ಹಿಂದುಮುಂದು ನೋಡದೆ, ವಿಜೃಂಭಿಸಿದ ತನ್ನಿಂದ ದೊಡ್ಡದೊಂದು ಅನರ್ಥವು ನಡೆದುಹೋಗಿ, ಪಾಪಸಂಘಟನೆಯಾಯಿತೆಂದು ಅವನು ಕುಗ್ಗಿಹೋದನು. "ಮಹಾತ್ಮ, ಸಂತಯಿಸಿಕೊ" ಎಂದು ಜೀಮೂತವಾಹನನನ್ನು ಸಮಾಧಾನಪಡಿಸಲು ಪ್ರಯತ್ನಿಸಿದನು.

ಯಾತನೆಯನ್ನನುಭವಿಸುತ್ತಿದ್ದ ಜೀಮೂತವಾಹನನು ಅಲ್ಲಿಗೂ ತನ್ನ ವಿನಯ ವಿಧೇಯತೆಗಳನ್ನು ಮುಂದುಮಾಡಿಕೊಂಡು, "ಶಂಖಚೂಡ, ಗುರುಗಳನ್ನು ಸಂತಯಿಸು" ಎಂದು ಅವನನ್ನು ಪ್ರಾರ್ಥಿಸಿದನು. ಆ ಮಾತನ್ನು ಕೇಳಿ ವೃದ್ಧ ಮಾತಾ ಪಿತೃಗಳು ರೋದಿಸಲಾರಂಭಿಸಿದರು. ಮಲಯವತಿಯಂತೂ ತನ್ನ ಪ್ರಿಯನ ಆ ಅವಸ್ಥೆಯನ್ನು ಕಂಡು ದುಃಖ ಭರವನ್ನು ತಾಳಲಾರದೆ, ಜೀವಿತವನ್ನು ತೊರೆಯಲು ಸಿದ್ಧಳಾದಳು. ಆಗ, ಜೀಮೂತವಾಹನನು ಗರುಡನನ್ನು ಹಿಯಾಳಿಸುತ್ತಿದ್ದ ತನ್ನ ವೃದ್ಧಮಾತೆಯನ್ನು ಕುರಿತು, "ಅಮ್ಮ, ಮೇದಸ್ಸು ಅಸ್ತಿ ಮಾಂಸ ರಕ್ತ ಸಂಘಾತಗಳಿಂದ ತುಂಬಿ ಚರ್ಮದ ಹೊದಿಕೆಯಿಂದ ಕೂಡಿರುವ ಈ ಶರೀರವು ಬಹಳ ಅಸಹ್ಯಕರವಾದದ್ದು, ಇಂತಹದರಲ್ಲಿ ಶೋಭೆ ಯೆತ್ತಣದು? ನೀನು ದುಃಖಿಸಬೇಡ" ಎಂದು ಹೇಳಿ ಸಮಾಧಾನ ಗೊಳಿಸಿದನು. ಗರುಡನಿಗೆ ಆ ಮಾತನ್ನು ಕೇಳಿ ನಿರ್ವೇದ ಹುಟ್ಟಿ, "ಮಹಾತ್ಮ, ನರಕದಲ್ಲಿ ಬಿದ್ದವನಂತೆ ದುಃಖವನ್ನನುಭವಿಸುತ್ತಿರುವ ನನಗೆ ಉಪದೇಶಮಾಡಿ ಉದ್ಧರಿಸಬೇಕು" ಎಂದು ಕೇಳಿಕೊಂಡನು. "ಅಯ್ಯಾ, ಪ್ರಾಣಿವಧೆಯನ್ನು ತೊರೆ. ಸಮುಸ್ತ ಭೂತಗಳಲ್ಲಿಯೂ ದಯೆಯನ್ನು ತೋರು. ಸಮುಸ್ತ ಸತ್ತ್ವಗಳಲ್ಲಿಯೂ ಪ್ರಯತ್ನಪುರಸ್ಸರ ವಾಗಿ ಅನುಕಂಪೆಯನ್ನು ತೋರಿ ಪುಣ್ಯ ಪ್ರವಾಹವನ್ನು ಗಳಿಸು. ಪ್ರಾಣಿಹಿಂಸೆಯ ಮೂಲಕ ಮುತ್ತಿದ ಪಾಪಗಳು ಆಳವಾದ ಮಡುವಿನಲ್ಲಿ ಹಾಕಿದ ಉಪ್ಪಿನ ಹರಳಿನಂತೆ ಅಳಿದುಹೋಗುವುವು" ಎಂದು ಉಪದೇಶ ಮಾಡಿದನು.

ಈ ಉಪದೇಶವಾಣಿಯನ್ನು ಕೇಳಿ ಗುರುಡನಿಗೆ ಅನಿರ್ವಚನೀಯ ವಾದ ವಿರಾಗವುಂಟಾಯಿತು. ಅಜ್ಞಾನ ನಿದ್ರೆಯಲ್ಲಿದ್ದ ಅವನಿಗೆ ಎಚ್ಚರ ವಾಯಿತು. ಕೂಡಲೆ, ಪ್ರಾಣಿವಧೆಯನ್ನು ಅಂದಿನಿಂದ ಮಾಡುವುದಿಲ್ಲ ವೆಂದು ಪ್ರತಿಜ್ಞೆಮಾಡಿದನು. ಇನ್ನುಮೇಲೆ ನಾಗಗಳೆಲ್ಲವೂ ನಿರಾತಂಕ ವಾಗಿ ವಿಹರಿಸಲೆಂದು ಅವನು ಸಾರಿದನು. ಈ ಮಾತುಗಳನ್ನು ಕೇಳಿ ಜೀಮೂತವಾಹನನಿಗೆ ಪರಮ ತೃಪ್ತಿಯಾಯಿತು. "ವೀರವರ, ನೀನು ಮಾಡಿದ ಈ ಪ್ರತಿಜ್ಞೆಯು ಸ್ಥಿರವಾಗಿರಲಿ" ಎಂದು ಅವನಿಗೆ ಹೇಳಿ,

ಶಂಖಚೂಡನನ್ನು ಇನ್ನು ಸಂತೋಷವಾಗಿ ಮನೆಗೆ ಹೋಗಿಬಾರೆಂದು ಪ್ರೇರಿಸಿದನು.

ಇಷ್ಟುಹೊತ್ತಿಗೆ ಜೀಮೂತವಾಹನನಿಗೆ ಉತ್ಕ್ರಮಣಾವಸ್ಥೆಯು ಸಮೀಪಿಸಿತು. ಮರ್ಮಗಳನ್ನು ಛೇದಿಸುವ ಯಾತನೆಯನ್ನು ಸಹಿಸಲಾರದೆ, ಕಡೆಯ ಸಲ ಅವನು ಶಂಖಚೂಡನ ಸಹಾಯದಿಂದ ತನ್ನೆರಡೂ ಕೈಗಳನ್ನು ಜೋಡಿಸಿ, ತಾಯಿತಂದೆಗಳಿಗೆ ಮಣಿದು, ತಾನು ನಾಗಕುಮಾರನ ಸಂರಕ್ಷಣೆಗಾಗಿ ಆತ್ಮಾರ್ಪಣಮಾಡಿದುದಕ್ಕಾಗಿ ಅಮಿತಾನಂದವನ್ನು ಸೂಚಿಸುತ್ತ ಕೆಳಗೆ ಬಿದ್ದುಹೋದನು.

ಜೀಮೂತಕೇತುವೂ ಪುತ್ರಮರಣದುಃಖವನ್ನು ಸಹಿಸಲಾರದೆ ಕಂದಿಹೋದನು. ವೃದ್ಧಮಾತೆಯ ದುಃಖಕ್ಕೆ ಮೇರೆಯೇ ಇರಲಿಲ್ಲ. ಪ್ರಣಯಿನಿಯೂ ಪತಿವ್ರತೆಯೂ ಆದ ಮಲಯವತಿಯು ಪತಿವಿರಹದಿಂದ ಸೊರಗಿಹೋದಳು. "ಧೈರ್ಯವು ಆಸರೆಯಿಲ್ಲದುದಾಯಿತು. ವಿನಯವು ಯಾರನ್ನು ಶರಣುಹೊಗಬೇಕು? ಕ್ಷಮೆ ಶಾಂತಿಗಳು ಯಾರನ್ನು ಆಶ್ರಯಿಸಬೇಕು? ವಿರಾಗ, ದಾನಪರತೆ, ಸತ್ಯ, ಕೃಪೆ ಎಲ್ಲವೂ ಬರಿದಾಯಿತು. ಮಗನೇ, ನೀನು ಲೋಕಾಂತರವನ್ನೈದಲು ಜಗತ್ತೇ ಶೂನ್ಯವಾಗಿಹೋಯಿತು" ಎಂದು ಜೀಮೂತಕೇತುವು ರೋದಿಸುತ್ತಿರಲು, ವೃದ್ಧಮಾತೆಯು "ಪೂಜ್ಯರಾದ ಲೋಕಪಾಲಕರಾದರೂ ಅಮೃತವೃಷ್ಟಿಯನ್ನು ವರ್ಷಿಸಿ ನನ್ನ ಮುದ್ದುಮಗನನ್ನು ಬದುಕಿಸಬಾರದೇ" ಎಂದು ಕೂಗಿಡುತ್ತಿರಲು, ಗರುಡನು ತಾನೇ ದೇವೇಂದ್ರನನ್ನು ಯಾಚಿಸಿ ಅಮೃತವನ್ನು ತಂದು ಜೀಮೂತವಾಹನನ್ನೊಬ್ಬನನ್ನೇ ಅಲ್ಲದೆ, ತಾನು ಹಿಂದೆ ಕೊಂದು ತಿಂದಿರುವ ನಾಗರೆಲ್ಲರನ್ನೂ ಬದುಕಿಸುವುದಾಗಿ ಸಂಕಲ್ಪಿಸಿ ಹೊರಟನು.

ಇತ್ತ ಮಲಯವತಿಗೆ ದುಃಖವುಕ್ಕುಕ್ಕಿ ಬರುತ್ತಿರಲು, ಹಿಂದೆ ಗೌರೀದೇವಿಯು ಕನಸಿನಲ್ಲಿ ಕಾಣಿಸಿಕೊಂಡು ವಿದ್ಯಾಧರ ಚಕ್ರವರ್ತಿಯು ತನಗೆ ಭರ್ತನಾಗುವನೆಂದು ನುಡಿದಿದ್ದ ಆಕೆಯ ಅಭಯವಚನವನ್ನು ಸ್ಮರಿಸಿ, "ದೇವಿ, ಪರಮಪೂಜ್ಯಳಾದ ನೀನಾಡಿದ ಮಾತುಗಳು ಸುಳ್ಳಾದುವೆ? ಅಯ್ಯೋ, ನನ್ನಂತಹ ಮಂದಭಾಗಿನಿ ಯಾರು?" ಎಂದು

ರೋದಿಸಿದಳು. ಕರುಣಾಮಯಿಯಾದ ಗೌರಿಯು ಅವಳ ಸಂತಾಪವನ್ನು ಕಳೆಯಲೋಸುಗ ಕೂಡಲೆ ಪ್ರತ್ಯಕ್ಷಳಾಗಿ, ಮೊದಲೇ ಶಂಖಚೂಡನು ರಚಿಸಿದ್ದ ಚಿತೆಯನ್ನು ಏರಲುಜ್ಜುಗಿಸುತ್ತಿದ್ದ ಜೀಮೂತಕೇತುವನ್ನು ತಡೆದು, ತನ್ನ ಕೈಯಲ್ಲಿದ್ದ ಕಮಂಡಲುವಿನ ಜಲವನ್ನು ಜೀಮೂತ ವಾಹನನಮೇಲೆ ಸೇಚಿಸಿ, ಅವನನ್ನು ಅಕ್ಷತ ಶರೀರನನ್ನಾಗಿ ಮಾಡಿ ಬದುಕಿಸಿದಳು. ಎಲ್ಲರ ಆನಂದಕ್ಕೂ ಪಾರವಿಲ್ಲವಾಯಿತು. ಜೀಮೂತ ವಾಹನನು ಗೌರೀದೇವಿಯನ್ನು ಸಂದರ್ಶಿಸಿ, "ಇಷ್ಟಾರ್ಥಗಳನ್ನು ಕರುಣಿಸುವ, ಮಣಿದವರ ಕಷ್ಟಗಳನ್ನು ಪರಿಹರಿಸುವ, ಶರಣ್ಯೆ, ವಿದ್ಯಾಧರ ವಂದಿತೆ, ಗೌರಿ! ನಿನ್ನ ಅಡಿಗಳಿಗೆ ಇದೋ ಮಣಿಯುವೆನು" ಎಂದು ಸ್ತುತಿಸಿ, ಭಕ್ತಿನಮ್ರವಾಗಿ ನಮಸ್ಕರಿಸಿದನು.

ಆ ಹೊತ್ತಿಗೆ ಗರುಡನೂ ಸ್ವರ್ಗಲೋಕದಿಂದ ಅಮೃತವನ್ನು ತಂದು ವರ್ಷಿಸಲಾಗಿ ಎಷ್ಟೋ ಕಾಲದ ಹಿಂದೆ ಅಸ್ತಿಗಳಾಗಿ ಬಿದ್ದಿದ್ದ ನಾಗರೆಲ್ಲರೂ ಹೃಷ್ಟಪುಷ್ಟಶರೀರಿಗಳಾಗಿ ಜೀವಿತವನ್ನು ಪಡೆದು ಅತ್ತಿತ್ತ ಸಂಚರಿಸ ಲಾರಂಭಿಸಿದರು. ಜೀಮೂತವಾಹನನು ಆ ದೃಶ್ಯವನ್ನು ಕಂಡು ಆನಂದ ಸಮುದ್ರದಲ್ಲಿ ಓಲಾಡಿದನು. ಸುಪ್ರಸನ್ನಳಾದ ಗೌರೀದೇವಿಯ ಪರಮಾ ಶೀರ್ವಾದವು ಅವನಿಗೆ ಲಭಿಸಿತು. ವಿದ್ಯಾಧರ ಚಕ್ರಾಧಿಪತ್ಯಕ್ಕೆ ಆಕೆಯ ಅನುಗ್ರಹದಿಂದ ಅವನು ಒಡೆಯನಾದನು. ಶಂಖಚೂಡನ ಸಂರಕ್ಷಣೆ ಯಾಯಿತು. ಪತಗಪತಿಯಾದ ವೈನತೇಯನು ವಿನೀತನಾದನು. ಹಿಂದೆ ಅವನು ಭಕ್ಷಿಸಿದ್ದ ನಾಗರೆಲ್ಲರೂ ಮತ್ತೆ ಬದುಕಿದರು. ತಾನು ಮೃತಿಯೊಂದಿ ತನ್ನ ತಾಯಿತಂದೆಗಳೂ ಅಳಿಯುವ ಸನ್ನಿವೇಶವು ತಪ್ಪಿತು. ವಿದ್ಯಾಧರ ಚಕ್ರವರ್ತಿಪದವಿಯು ದೊರೆಯಿತು. ಗೌರೀದೇವಿಯ ಸಾಕ್ಷಾದ್ದರ್ಶನ ವಾಯಿತು ಎಂದು ಅವನು ಪರಮ ಸಂತುಷ್ಟನಾಗಿ ಎಲ್ಲರೊಡನೆಯೂ ರಾಜಧಾನಿಗೆ ತೆರಳಿ ಬಹು ಕಾಲ ಸಾಮ್ರಾಜ್ಯವನ್ನು ಆಳಿದನು.

ವೃಷ್ಟಿಂ ಹೃಷ್ಟ ಶಿಖಂಡಿತಾಂಡವಕೃತೇ ಮುಂಚಂತು ಕಾಲೇ ಘನಾಃ
ಕುರ್ವಂತು ಪ್ರತಿರೂಢ ಸಂತತ ಹರಿತ್ ಶಸ್ಯೋತ್ತರೀಯಾಂ ಕ್ಷಿತಿಂ ।
ಚಿನ್ವಾನಾಃ ಸುಕೃತಾನಿ ವೀತವಿಪದೋ ನಿರ್ಮತ್ಸರೈರ್ಮಾನಸೈಃ
ಮೋದಂತಾಂ ಸತತಂಚ ಬಾಂಧವ ಸುಹೃದ್ ಗೋಷ್ಠೀ ಪ್ರಮೋದಾಃ ಪ್ರಜಾಃ ॥

---

# ವೇಣೀ ಸಂಹಾರ

ಪಾಂಡವರು, ದುರ್ಯೋಧನನು ಬೀಸಿದ ಕಪಟ ದ್ಯೂತದ ಬಲೆಗೆ ಸಿಕ್ಕಿಬಿದ್ದು ಸೋತು, ದ್ಯೂತ ಸಮಯದಂತೆ ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತವಾಸವನ್ನೂ ಕಷ್ಟ ಸಹಿಷ್ಣುತೆ ಯಿಂದ ಕಳೆದು ಕೃತಕೃತ್ಯರಾಗಿ ಮತ್ತೆ ಗ್ರಾಮಪ್ರವೇಶ ಮಾಡಿದರು. ಇಷ್ಟಾದರೂ ದಾಯಭಾಗವಾಗಿ ಅವರಿಗೆ ಸಲ್ಲಬೇಕಾಗಿದ್ದ ರಾಜ್ಯಾರ್ಧ ವನ್ನು ದುರ್ಯೋಧನನು ಕೊಡಲೊಪ್ಪಲಿಲ್ಲ. ಅವನು ಒಪ್ಪುವುದಿಲ್ಲ ವೆಂದೂ ಪೌರುಷದಿಂದಲೇ ಪಡೆಯಬೇಕೆಂದೂ ಪಾಂಡವರಿಗೂ ಗೊತ್ತಿದ್ದಿತು. ಆದರೂ ಕ್ಷಮೆ ಬಂಧು ಪ್ರೇಮಗಳೇ ಮೂರ್ತೀಭವಿಸಿ ದಂತಿದ್ದ ಧರ್ಮನಂದನನಾದ ಯುಧಿಷ್ಠಿರನು ಸಂಧಿಯನ್ನೇ ಬಯಸಿದನು. ಇದು ಅವನ ತಮ್ಮಂದಿರಾರಿಗೂ ಹಿತವಾಗಿರಲಿಲ್ಲ. ಪಡಬಾರದ ಕಷ್ಟಗಳೆಲ್ಲವನ್ನೂ ಪಟ್ಟು, ರೋಸಿ, ಕ್ಷಾತ್ರದ ಚರಮ ಸೀಮೆಯನ್ನು ಮುಟ್ಟಿದ್ದ ದ್ರುಪದನಂದನೆಯ ಮನೋಗತವಂತೂ ಈ ನಾಲ್ವರು ತಮ್ಮಂದಿರ ಅಹಿತಾಗ್ನಿಗೆ ಆಜ್ಯಾಹುತಿಯಂತಿದ್ದಿತು. ಧರ್ಮನಂದನನಿಗೆ ಇದೆಲ್ಲ ಗೊತ್ತಿದ್ದರೂ, ದುರ್ಯೋಧನನ ಕೊಂಕುತನವು ಈವರೆಗಾಗಲೆ ಚೆನ್ನಾಗಿ ಮನವರಿಕೆಯಾಗಿದ್ದರೂ ಬಂಧುನಾಶಕ್ಕೆ ಹೆದರಿ, ಆಪ್ತ ಬಂಧುವಾದ ಶ್ರೀ ಕೃಷ್ಣನನ್ನು ಒಪ್ಪಿಸಿ ಸಂಧಾನಕ್ಕಾಗಿ ಕಳುಹಿಸಿದನು.

ಕೃಷ್ಣನು ಸಂಧಾನಕ್ಕೆ ತೆರಳಿದ ಸುದ್ದಿಯು ಭೀಮನ ಕಿವಿ ಮುಟ್ಟಿತು. ಮೊದಲೆ ಅಪಮಾನಶಲ್ಯದಿಂದ ನೊಂದು ಸೇಡಿಗಾಗಿಯೆ ಕಾದಿದ್ದ ಅವನ ಕೋಪಕ್ಕೆ ಮಿತಿಯೇ ಇಲ್ಲವಾಯಿತು. ಸಭೆಯಲ್ಲಿ ದ್ರೌಪದಿಗಾದ ಅಪಮಾನ, ತಾವೆಲ್ಲರೂ ನಾರುಡೆಯುಟ್ಟು ಬೇಡರೊಡನೆ ಬೇಡರಾಗಿ ಕಾಡು ಕಾಡೂ ಅಲೆದುದು, ವಿರಾಟರಾಜನ ರಾಜ್ಯದಲ್ಲಿ ಕಷ್ಟಪಟ್ಟುದು, ಇಷ್ಟೆಲ್ಲವನ್ನೂ ಸಹಿಸಿಯೂ ಅಣ್ಣನಾದ ಯುಧಿಷ್ಠಿರನು ಕೌರವರಲ್ಲಿ ಸೇಡಿಗಾಗಿ ಸಂಕಲ್ಪಿಸದೆ ಸಂಧಿಗಟ್ಟಿದನೆ ಕೃಷ್ಣನನ್ನು?—ಎಂದು ಅವನು ಕಿಡಿಕಿಡಿಯಾದನು.

ಕಿರಿಯನಾದ ಸಹದೇವನು ಅವನನ್ನು ಸಮಾಧಾನಪಡಿಸಲು ಮಾಡಿದ ಪ್ರಯತ್ನಗಳೆಲ್ಲಾ ವಿಫಲವಾಯಿತು. ಭೀಮಸೇನನು ಒತ್ತಿ ಬರುತ್ತಿದ್ದ ರೋಷದಿಂದ, "ಸಹದೇವ, ಆರ್ಯನಿಗೆ ಈ ಸುದ್ದಿಯನ್ನು ಅರುಹು : ಕೌರವರನ್ನು ನುಚ್ಚುನುರಿ ಮಾಡುವ ಈ ಒಂದು ದಿನ ಮಾತ್ರ ನೀನು ನನಗೆ ಗುರುವೂ ಅಲ್ಲ, ನಾನು ನಿನಗೆ ವಿಧೇಯನೂ ಅಲ್ಲ" ಎಂದು ಮೂದಲಿಸಿ ನುಡಿದು ಮುಂದುವರಿದನು. ಸಹದೇವನು, ಇನ್ನೇನು ವಿಪರೀತವಾಗುವುದೊ ಎಂದು ಅವನನ್ನೇ ಹಿಂಬಾಲಿಸಿ ಹೋದನು. ಆಗ ಭೀಮನು ಹಿಂತಿರುಗಿ, "ಸಹದೇವ, ನೀನು ಹೊರಡು ; ಗುರುಜನರ ಸೇವೆಯಲ್ಲಿ ತೊಡಗು. ನಾನು ಆಯುಧಾಗಾರಕ್ಕೆ ಹೋಗಿ ಆಯುಧ ಸಹಿತನಾಗಿ ಬರುವೆನು" ಎಂದನು.

ಆದರೆ ಭೀಮನು ಹೋಗುತ್ತಿದ್ದುದು ಆಯುಧಾಗಾರಕ್ಕಲ್ಲ, ದ್ರುಪದ ನಂದನೆಯ ಭವನವಿದ್ದೆಡೆಗೆ. ಕನಲಿ ಮೈಮರೆತಿದ್ದ ಭೀಮಸೇನನಿಗೆ ಈ ಮಾರ್ಗಾಂತರ ಗೊತ್ತಾಗಲಿಲ್ಲ. ಸಹದೇವನಿಗೆ ಯೋಚನೆಗಿಟ್ಟು ಕೊಂಡಿತು. ವಿಧಿಯಿಲ್ಲದೆ ಅವನು ಆ ವಿಷಯವನ್ನು ಭೀಮನಿಗೆ ತಿಳಿಸಿದನು. ಪಾಂಚಾಲಿಯ ಭವನವೆಂದೊಡನೆ ಭೀಮನ ಮನಸ್ಸು ಆಕಡೆಗೊಲಿಯಿತು. ಪಾಂಚಾಲಿಯೊಡನೆಯೂ ಯೋಚಿಸಬೇಕಾದ ವಿಷಯವುಂಟೆಂದು ಸಹದೇವನೊಡನೆಯೇ ಅಲ್ಲಿಗೆ ಬಂದನು. ಅಷ್ಟುಹೊತ್ತಿಗೆ ಅವನ ಮನಸ್ಸು ಸ್ವಲ್ಪ ಸಮಾಧಾನಕ್ಕೆ ಬಂದಿದ್ದಿತು. ಆದರೂ ಯುಧಿಷ್ಠಿರನ ಮೇಲಿನ ಅಸಮಾಧಾನವೇನೂ ಕಡಮೆ ಯಾಗಿರಲಿಲ್ಲ. "ವತ್ಸ, ಕೌರವರೊಡನೆ ಸಂಧಿ ಬಯಸಿ ಆರ್ಯನು ನಮ್ಮನ್ನು ಹೀಗೆ ಪೀಡಿಸಬಹುದೆ?" ಎಂದು ಅವನು ದುಃಖಮಿಶ್ರವಾದ ಕೋಪದಿಂದ ನುಡಿದನು. ಆಗ ಸಹದೇವನು ಅಲ್ಲಿಯೆ ಇದ್ದ ಪೀಠ ವೊಂದನ್ನು ತೋರಿ, "ಆರ್ಯನು ಇಲ್ಲಿ ಕುಳಿತು ಕೃಷ್ಣಾಗಮನವನ್ನು ನಿರೀಕ್ಷಿಸಬಹುದು" ಎಂದು ಹೇಳಿದನು.

ಕೃಷ್ಣಾಗಮನವೆಂಬ ಮಾತು ಕಿವಿಗೆ ಬೀಳುತ್ತಲೆ ಭೀಮನ ಮನಸ್ಸು ಶ್ರೀ ಕೃಷ್ಣನ ಕಡೆಗೆ ಸುಳಿಯಿತು. "ಪೂಜ್ಯನಾದ ಕೃಷ್ಣನು ಯಾವ ಸಮಯದಮೇಲೆ ದುರ್ಯೋಧನನೊಡನೆ ಸಂಧಿಗಾಗಿ ಹೋಗಿರುವನು?"

ಎಂದವನು ಕೇಳಿದನು. "ಐದು ಗ್ರಾಮಗಳಿಗೋಸುಗ" ಎಂದು ಸಹದೇವನಿಂದ ಉತ್ತರ ಬಂದೊಡನೆ, ಅವನಿಗಾದ ಅಸಹ್ಯವೇದನೆಯು ಅವರ್ಣನೀಯವಾಯಿತು. ಎರಡೂ ಕಿವಿಗಳನ್ನು ಮುಚ್ಚಿ, ಕೋಪ ರೋಷಗಳು ಉಕ್ಕಿಬರುತ್ತಿರಲು, "ವತ್ಸ, ಈ ಮಾತು ನೀನು ಹೇಳಲೂ ಇಲ್ಲ, ಈ ಭೀಮನು ಕೇಳಲೂ ಇಲ್ಲ" ಎಂದು ಗಜರಿದನು.

ಇಬ್ಬರೂ ಹೀಗೆ ಮಾತನಾಡುತ್ತಿರುವಂತೆಯೆ ದ್ರುಪದನಂದನೆಯು ಅಲ್ಲಿಗೆ ಬಂದಳು. ಹೊಸದೊಂದು ಅಪಮಾನಶಲ್ಯದಿಂದ ನೊಂದು ಅವಳು ಕಂಬನಿಗರೆಯುತ್ತಿದ್ದಳು. ಗೆಳತಿ ಬುದ್ಧಿಮತಿಕೆಯು ಅವಳನ್ನು ಪರಿಪರಿಯಾಗಿ ಸಂತಯಿಸುತ್ತಿದ್ದಳು. ಸೇಡಿನ ಯೋಚನೆಯಲ್ಲಿಯೇ ಇದ್ದ ಭೀಮನು ಅವಳ ಬರವನ್ನು ಗಮನಿಸಲಿಲ್ಲ. ಸಹದೇವನು ಅವಳನ್ನು ಕಂಡು, ಭೀಮ ಸಾಂತ್ವನವಿನ್ನು ಅಸಾಧ್ಯವೆಂದೇ ನಿರ್ಧರಿಸಿದನು. ಅಷ್ಟರಲ್ಲಿ ಭೀಮನೂ ಅವಳನ್ನು ಕಂಡು, "ಕೋಪಭರದಲ್ಲಿ ನಿನ್ನ ಆಗಮನ ತಿಳಿಯಲಿಲ್ಲ. ಮುನಿಯದಿರು ದೇವಿ!" ಎಂದು ಸಂತವಿಟ್ಟನು. ಭೀಮನ ಕೋಪವು ಅವಳ ಮನಸ್ಸಿಗೆ ನಿಜವಾಗಿಯೂ ಸ್ವಲ್ಪ ಸಮಾಧಾನವನ್ನು ತಂದರೂ ಸ್ವಲ್ಪ ಹೊತ್ತಿಗೆ ಮುಂಚೆ ಅನುಭವಿಸಿದ ಅಪಮಾನವು ಅವಳಿಂದ ನಿಟ್ಟುಸಿರಿಡಿಸಿತು. ಭೀಮನದನ್ನು ಸಹಿಸದೆ ಕಾರಣವೇನೆಂದು ಕೇಳಿದನು. "ಹೇಳದಿರುವೆಯೇಕೆ? ಅಥವಾ ಹೇಳಿದರೂ ಏನು ಪ್ರಯೋಜನ? ಹಿಂದೆ ನೀನು ಪಟ್ಟ ಪಾಡಿಗೆಲ್ಲ ನಾವು ಮಾಡಿದ ಪ್ರತೀಕಾರವೇನು?" ಎಂದೂ ಹೇಳಿದನು.

ಈ ಮಾತು ದ್ರೌಪದಿಗೆ ಮತ್ತಷ್ಟು ಸಮಾಧಾನವನ್ನುಂಟು ಮಾಡಿತು. ಐವರು ಗಂಡಂದಿರಲ್ಲಿ ತನಗಾಗಿ ಖತಿಗೊಂಡು ಸೇಡು ತೀರಿಸುವನೆಂದರೆ ಭೀಮಸೇನನೇ; ಅದು ಅವಳಿಗೆ ಚೆನ್ನಾಗಿ ಗೊತ್ತಿದ್ದುದರಿಂದ, ಗೆಳತಿಯ ಮೂಲಕ ತನ್ನ ಸಂಕಟವನ್ನವನಲ್ಲಿ ಹೇಳಿಕೊಂಡಳು. ಕುಂತಿ, ಸುಭದ್ರೆ ಮೊದಲಾದವರೊಡನೆ ಪೂಜ್ಯೆಯಾದ ಗಾಂಧಾರಿಯ ಪಾದವಂದನೆಗಾಗಿ ಅವಳು ಹೋಗಿದ್ದುದು, ಅಲ್ಲಿಂದ ಬರುತ್ತಿದ್ದಾಗ ದುರ್ಯೋಧನನ ಮಡದಿ ಭಾನುಮತಿಯು ಕಂಡು, "ಎಲೌ ಯಾಜ್ಞಸೇನಿ, ನಿನ್ನ ಪತಿಗಳೈವರೂ ಐದು ಗ್ರಾಮಗಳನ್ನು ಬೇಡುತ್ತಿರುವರೆಂದು ನಾನು

ಕೇಳಿದೆ, ಇನ್ನಾದರೂ ಬಿರಿಹೊಯ್ದುಕೊಂಡಿರುವ ನಿನ್ನ ಕುರುಳನ್ನು ಕಟ್ಟಬಾರದೆ'' ಎಂದು ಕೇಳಿದುದು, ಅದಕ್ಕೆ ಬುದ್ಧಿಮತಿಕೆಯು ''ನಿಮ್ಮ ಕುರುಳನ್ನು ಬಿರಿಹೊಯಿಸದೆ ದೇವಿಯು ಕುರುಳು ಕಟ್ಟಿಯಾಳೆ?'' ಎಂದುದು ಮೊದಲಾದ ಎಲ್ಲ ವಿಚಾರಗಳೂ ಭೀಮನಿಗೆ ತಿಳಿದುವು. ಅವನಿಗೆ ಒಡನೆಯೆ ಚಲವೇರಿ ಉಕ್ಕಿಬಂದಿತು. ಪಾಂಚಾಲಿಯನ್ನು ಕುರಿತು, ''ದೇವಿ, ಹೆಚ್ಚಾಗಿ ಹೇಳಿ ಪ್ರಯೋಜನವೇನು, ಇದೊ ಈ ಪ್ರತಿಜ್ಞೆಯ ನ್ನಾಲಿಸು: ಚಂಡ ಗದಾಭಿಘಾತ ಸಂಘಟ್ಟನದಿಂದ ಪುಡಿಪುಡಿಯಾಗುವ ಸುಯೋಧನನ ಊರುಯುಗಳದ ಕೆನ್ನೆತ್ತರ ಪ್ರವಾಹದಲ್ಲಿ ಅದ್ದಿ ತೆಗೆದ ಈ ನನ್ನ ಕರಗಳಿಂದ ನಿನ್ನ ಕುರುಳು ಕಟ್ಟುವೆನು! ಶೋಕಿಸದಿರು'' ಎಂದು ವಿಜೃಂಭಿಸಿದನು.

ಚಂಡ ಭೀಮನ ಈ ಪ್ರಚಂಡ ಪ್ರತಿಜ್ಞೆಯು ಪಾಂಚಾಲಿಯ ಮನಸ್ಸಿಗೆ ಹರ್ಷ ತಂದಿತು. ಅದರೊಡನೆಯೆ ಧರ್ಮನಂದನನೊಪ್ಪುವನೆ ಎಂಬ ಸಂಶಯವೂ ಮೂಡಿತು. ಅದು ತಾವೆಲ್ಲರೂ ಒಪ್ಪಿದ ವಿಷಯವೆಂದೇ ಸಹದೇವನೂ ನುಡಿಯಲು, ಅದಕ್ಕೆ ಪಡಿನುಡಿಯೊ ಎಂಬಂತೆ, ಅವರೆಲ್ಲರ ಉತ್ಸಾಹವನ್ನು ಕೆರಳಿಸುವಂತಹ ಕೋಲಾಹಲ ಧ್ವನಿಯು ಆಗಲೆ ಕೇಳಬಂದಿತು.

ದುರ್ಯೋಧನನು ಕರ್ಣ, ಶಕುನಿ ಮೊದಲಾದ ದುರ್ಮಂತ್ರಿಗಳೊಡನೆ ಕೃಷ್ಣನ ವಿಷಯದಲ್ಲಿ ''ಇವನೇ ಪಾಂಡವರಿಗಿರುವ ಬಲ; ಇವನನ್ನೇ ಹಿಡಿದುಹಾಕಿದರೆ ಹಲ್ಲು ಮುರಿದ ಹಾವುಗಳಂತೆ ಪಾಂಡವರು ಒರಗುತ್ತಾರೆ'' ಎಂದು ದುರಾಲೋಚನೆ ಮಾಡಿ ಅವನನ್ನು ಬಂಧಿಸಲು ಪ್ರಯತ್ನಿಸಿದನು. ಅಮಿತಮಹಿಮನಾದ ಶ್ರೀ ಕೃಷ್ಣನು ಸಭೆಯಲ್ಲಿಯೆ ವಿಶ್ವರೂಪವನ್ನು ಮೆರೆದು, ವೀರಾಧಿವೀರರನ್ನೂ ಮರುಳುಗೊಳಿಸಿ, ಪಾಂಡವರ ಪಾಳೆಯಕ್ಕೆ ಮರಳಿ, ರಣದುಂದುಭಿಯನ್ನು ಮೊಳೆಯಿಸಿದನು. ಅದರ ಮಹಾನಾದವೇ ಆ ಕೋಲಾಹಲ. ಏನಿರಬಹುದೆಂದು ಭೀಮನು ಯೋಚಿಸುತ್ತಿರುವಂತೆಯೆ ಕಂಚುಕಿಯು ಅಲ್ಲಿಗೆ ಬಂದು ನಡೆದ ಸಂಗತಿಯನ್ನು ಅರುಹಿದನು. ಭೀಮನಿಗೆ ಆಶ್ಚರ್ಯ ಖೇದಗಳೆರಡೂ ಏಕಕಾಲದಲ್ಲಿಯೆ ಸಮನಿಸಿದುವು. ಒಡನೆಯೆ, ಆ ವಿಷಯದಲ್ಲವನಿಗೆ

ಒಂದು ಬಗೆಯ ವಿರಕ್ತಿಯೂ ಉಂಟಾಯಿತು. "ದುರ್ಯೋಧನನು ತಿಳಿವಿಲ್ಲದ ಗಾವಿಲ; ಅಂತಹವನು ಗೋವಿಂದನನ್ನು ಅರಿಯುವ ಬಗೆ ಹೇಗೆ?" ಎಂದುಕೊಂಡು, ಮಹಾರಾಜ ಯುಧಿಷ್ಠಿರನ ಉಜ್ಜುಗವನ್ನು ಕುರಿತು ಕಂಚುಕಿಯನ್ನು ಪ್ರಶ್ನಿಸಿ, ತಾನೇ ಅಲ್ಲಿಗೆ ಹೋಗಿ ತಿಳಿಯ ಬೇಕಾಗಿದ್ದುದರಿಂದ ಹೊರಡುವುದರಲ್ಲಿರಲು ಮತ್ತೆ ಕಲಕಲ ಧ್ವನಿಯೂ ಅದರೊಡನೆ "ಮಹಾರಾಜ ಯುಧಿಷ್ಠಿರನ ಕೋಪವಹ್ನಿ ವಿಜೃಂಭಿಸಿದೆ" ಎಂಬ ಮಾತೂ ಕೇಳಬಂದಿತು. ಭೀಮನ ಸಡಗರ ಸಂತೋಷಗಳಿಗೆ ಮೇರೆಯೆ ಇಲ್ಲವಾಯಿತು. "ಶತ್ರುವಿನ ಮಧ್ಯದಲ್ಲಿ ಮಹಾರಾಜನ ಕೋಪವಹ್ನಿ ತಡೆಯಿಲ್ಲದೆ ವಿಜೃಂಭಿಸಲಿ" ಎಂದು ಉದ್ಘೋಷಿಸಿದನು. ಮತ್ತೆಮತ್ತೆ ಆ ನಾದವೇ ಕೇಳಬರಲು ಉತ್ಸುಕೆಯಾದ ದ್ರುಪದ ನಂದನೆಯು ಅದೇನದೇನೆಂದು ಕೇಳಿದಳು. ಭೀಮಸೇನನು, "ದೇವಿ, ರಣಯಜ್ಞ ನಡೆಯುತ್ತದೆ. ನಾವು ನಾಲ್ವರೂ ಋತ್ವಿಜರು. ಪೂಜ್ಯನಾದ ಶ್ರೀಕೃಷ್ಣನೇ ಕರ್ಮೋಪದೇಶಕನಾದ ಆಚಾರ್ಯನು. ಮಹಾರಾಜ ಯುಧಿಷ್ಠಿರನೇ ದೀಕ್ಷಿತನು. ಪತ್ನಿಯಾದ ನೀನೇ ಗೃಹೀತವ್ರತೆ. ಕೌರವರೇ ಪಶುಗಳು. ಪ್ರಿಯಾಪರಿಭವಕ್ಲೇಶೋಪಶಾಂತಿಯೇ ಈ ಯಜ್ಞದ ಫಲ. ರಾಜಮಂಡಲವೆಲ್ಲವನ್ನೂ ಆಹ್ವಾನಿಸಲೋಸುಗವೇ ಈ ರಣದುಂದುಭಿಯು ಮೊಳಗುತ್ತಿದೆ" ಎಂದು ರಣಯಜ್ಞವನ್ನು ಅವಳ ಕಣ್ಣ ಮುಂದೆ ಚಿತ್ರಿಸಿದನು.

ಈ ವೀರಾಲಾಪವನ್ನು ಕೇಳಿ ದ್ರೌಪದಿಯು ಮನದುಂಬಿ ಹರ್ಷಿಸುತ್ತಿರುವಂತೆಯೇ ಅಣ್ಣನ ಆಣತಿ ಪಡೆದು ಸಮರಭೂಮಿಗೆ ನುಗ್ಗಿ ಪರಾಕ್ರಮವನ್ನು ಮೆರೆಯಹೋಗೋಣವೆಂದು ಸಹದೇವನು ಅರಿಕೆ ಮಾಡಲು, ಭೀಮಸೇನನು ಪಾಂಚಾಲಿಯನ್ನು ಮತ್ತೆ ಮನ್ನಿಸಿ ಹೊರಡಲನುವಾದನು. ಆಗ ಅವಳು ಸಂತೋಷ ಸಂಭ್ರಮಗಳಿಂದ ಅವನನ್ನು ಹರಸಿ, "ಆರ್ಯ, ಕೌರವರು ನನ್ನನ್ನು ಅಪಮಾನ ಮಾಡಿದ ಕೋಪದಿಂದ ನೀನು ರಣರಂಗದಲ್ಲಿ ಮೈಮರೆತು ಸಂಚರಿಸಬಾರದೆಂದು ನನ್ನ ಅರಿಕೆ" ಎಂದು ಉಪಚಾರೋಕ್ತಿಯನ್ನು ಹೇಳಿದಳು. ಅದಕ್ಕವನು, "ಎಲೌ ಸುಕ್ಷತ್ರಿಯೆ, ಈ ಭೀಮಸೇನನೂ ಹಗೆಗಳ ಸೇನೆಯಲ್ಲಿ ಜಾಗರೂಕನಾಗಿ

ಸಂಚರಿಸಬೇಕೆ? ಆನೆ ಕುದುರೆಗಳು ಮಡಿದುರುಳಿ, ತೇರುಗಳು ಮುರಿದು ರಾಸಿಯಾಗಿ ಹಳ್ಳತಿಟ್ಟುಗಳಾಗುವ ಕಳದಲ್ಲಿ ತಡೆಬಡೆಯಿಲ್ಲದೆ ನಡೆಯಲು ಪಾಂಡುಪುತ್ರರೆಲ್ಲರೂ ಪಂಡಿತರೆ. ಈ ಚಿಂತೆಯನ್ನು ತೊರೆ" ಎಂದು ಆಶ್ವಾಸನವಿತ್ತು ಸಹದೇವನೊಡನೆ ಧರ್ಮರಾಜನನ್ನು ಕಾಣಲು ದ್ರೌಪದಿಯು ಬೀಳ್ಕೊಂಡನು.

ಕೌರವ ಪಾಂಡವರಿಗೆ ಪ್ರಬಲ ಯುದ್ಧವು ಪ್ರಾರಂಭವಾಗಿದೆ. ಇತ್ತಂಡದವರೂ ಬಂಧು ನಾಶಕ್ಕೆ ಎಳ್ಳಷ್ಟು ಅಳುಕದೆ ಕಲ್ಲೆದೆ ಮಾಡಿ ಕೊಂಡು ಕಾದತೊಡಗಿದ್ದಾರೆ. ದುರ್ಯೋಧನನ ಸೇನೆಯಲ್ಲಿ ಆದಿಸೇನಾ ಪತಿಗಳಾದ ವೃದ್ಧ ಪಿತಾಮಹ ಭೀಷ್ಮಾಚಾರ್ಯರು ಹತ್ತು ದಿನಗಳ ಕಾಲ ಪಾಂಡವ ವೀರರೊಡನೆ ವೀರವನ್ನು ಮೆರೆದು ಕಾದಿ ಕಡೆಗೆ ಪಾರ್ಥನ ಬಾಣದಿಂದ ನೊಂದು ದುರ್ಬಲರಾಗಿ ಶರತಲ್ಪದಮೇಲೆ ಮಲಗಿದ್ದಾರೆ. ದುರ್ಯೋಧನನು ಎದೆಗುಂದದೆ ಚಾಪವಿದ್ಯಾಚಾರ್ಯರಾದ ದ್ರೋಣರಿಗೆ ಸೈನಾಪತ್ಯವನ್ನು ವಹಿಸಿಕೊಟ್ಟು, ಕಾಳಗವನ್ನು ರಭಸದಿಂದ ಮುಂದು ವರಿಸಿದ್ದಾನೆ. ಪ್ರಬಲ ಪರಾಕ್ರಮಿಗಳಾದ ದ್ರೋಣರು ದುರ್ಭೇದ್ಯ ವಾದ ಪದ್ಮವ್ಯೂಹವನ್ನು ರಚಿಸಿ, ಅಸಮಸಮರವನ್ನು ಹೂಡಿದ್ದಾರೆ. ಆಗ ಯುಧಿಷ್ಠಿರನ ಆಣತಿಯನ್ನು ಕೈಕೊಂಡು ಪಾರ್ಥನಂದನನಾದ ಅಭಿಮನ್ಯುವು ಆ ವ್ಯೂಹವನ್ನು ಭೇದಿಸಿ, ಅರಾತಿಗಳನೇಕರನ್ನು ಸದೆದು ಪರಾಕ್ರಮವನ್ನು ವಿಜೃಂಭಿಸಿದನು. ದುರ್ಯೋಧನಾದಿಗಳು ಅವನ ಶೌರ್ಯಕ್ಕೆ ಬೆರಗಾಗಿ ಮುಂದುಗಾಣದಾದರು. ಆಗ ಕರ್ಣನೇ ಮೊದಲಾದ ಅತಿರಥಮಹಾರಥರು ಒಟ್ಟುಗೂಡಿ ವ್ಯೂಹಮಧ್ಯೇ ಏಕಾಕಿಯಾದ ವೀರ ಬಾಲಕನನ್ನು ಕಪಟದಿಂದ ಕೊಂದುಕೆಡವಿದರು. ಈ ಹತ್ಯೆಯು ದುರುಳ ದುರ್ಯೋಧನನಿಗೆ ಹಿತವಾದುದು ಮಾತ್ರವಲ್ಲದೆ ಅವನನ್ನು ಸಂತೋಷ ಸಾಗರದಲ್ಲಿಯೇ ಮುಳುಗಿಸಿತು. ಅಭಿಮನ್ಯು ಮರಣದಿಂದ ಎಲ್ಲೆಲ್ಲಿಯೂ ಶೋಕವೇ ಮುತ್ತಿರಲು ಅವನು ಆ ತನ್ನ ಸಂತೋಷದ ಸಂಗತಿಯನ್ನು ಅರ್ಧಾಂಗಿಯಾದ ಭಾನುಮತಿಗೆ ತಿಳಿಸಿ ಅವಳೊಡನೆ ನಲಿದು ಆಮೇಲೆ ಕರ್ಣಾದಿಗಳನ್ನು ಅಭಿನಂದಿಸ ಬಯಸಿದನು.

ಭಾನುಮತಿಗೆ ಹಿಂದಿನ ರಾತ್ರಿ ಮನಸ್ಸನ್ನೇ ಕಲಕಿಬಿಡುವಂತಹ

ದುಃಸ್ವಪ್ನ. ಸ್ವಪ್ನದಲ್ಲಿ ನಕುಲವೊಂದು ಒಂದೇ ತಡವೆಗೇ ನೂರು ಹಾವುಗಳನ್ನು ಕಡಿದುಹಾಕಿದ ಭಯಂಕರ ದೃಶ್ಯ. ಅದು ಅವಳಿಗೆ 'ವಾಮಾನಿಕೆ'ಯನ್ನುಂಟುಮಾಡಿದೆ. ಸಮರ ಸಮಯದಲ್ಲಿ ತನಗಾದ ಆ ಕನಸು ಕೌರವರಿಗೆ ಅಮಂಗಳದ ಸೂಚನೆಯೆಂದೇ ಅವಳ ಭಾವನೆ. ಅಮಂಗಳನಿವಾರಣೆಗಾಗಿ ದೇವತೆಗಳನ್ನು ಆರಾಧಿಸಲು ಅವಳು ಬಾಲೋದ್ಯಾನಕ್ಕೆ ಬಂದಳು.

ವೃದ್ಧ ಕಂಚುಕಿಯಾದ ವಿನಯಂಧರನಿಂದ ಈ ಸುದ್ದಿಯು ದುರ್ಯೋಧನನಿಗೆ ತಿಳಿದು, ಅವಳನ್ನು ಕಾಣಲು ಅವನೂ ಬಾಲೋದ್ಯಾನಕ್ಕೆ ಬಂದನು. ಬರುವಾಗ ದಾರಿಯಲ್ಲಿ ಒಡನಿದ್ದ ವಿನಯಂಧರನನ್ನು ಕುರಿತು ಅವನು "ನೋಡು ವಿನಯಂಧರ, ಶತ್ರುಗಳ ಅಪಕಾರಕ್ಕೆ ಪ್ರತ್ಯಕ್ಷವಾಗಿಯೊ, ಪರೋಕ್ಷವಾಗಿಯೊ ಹೇಗಾದರೂ ಸರಿಯೆ, ಪ್ರತೀಕಾರವಾದರೆ ಮನಸ್ಸಿಗೆ ಎಷ್ಟೋ ಸಮಾಧಾನವಾಗುತ್ತದೆ. ಅಭಿಮನ್ಯುವು ಮಡಿದುದು ಈಗ ನನಗೆ ಅಂತಹ ಸಮಾಧಾನವನ್ನು ತಂದಿದೆ" ಎಂದನು. ವಿನಯಂಧರನು ಮಾತು ಬಲ್ಲವನು. "ಮಹಾರಾಜ, ಆಚಾರ್ಯರ ಅಸ್ತ್ರ ಬಲಕ್ಕೆ ಇದೇನೂ ಅಸಾಧ್ಯವಲ್ಲ. ಆದರೂ ಕರ್ಣ ಜಯದ್ರಥರಿಗೆ ಇದೊಂದು ಹೆಮ್ಮೆಯೆಂದು ಹೇಳಲಾಗುವುದಿಲ್ಲ" ಎಂದು ಅರ್ಥವತ್ತಾಗಿ ಮಾತನಾಡಿದನು. ದುರ್ಯೋಧನನಿಗೆ ಈ ಮಾತಿನ ಅಭಿಪ್ರಾಯವು ಸ್ಪಷ್ಟವಾಯಿತು. ಅವನ ಮನಸ್ಸೂ ಸ್ವಲ್ಪ ಅಳುಕಿತು. ಆದರದನ್ನು ಹೊರಪಡಿಸದೆ, "ಹಲವರು ಸೇರಿ ಹುಡುಗನೊಬ್ಬನನ್ನು ಕೊಂದರೆಂಬ ಅಪಕೀರ್ತಿ ಬಂದಿತೆಂದು ಹೇಳುವೆಯಾ ವಿನಯಂಧರ? ಚಿಂತೆಯಿಲ್ಲ ; ಶಿಖಂಡಿಯನ್ನು ಮುಂದಿಟ್ಟುಕೊಂಡು ವೃದ್ಧರಾದ ಭೀಷ್ಮರನ್ನು ಹೊಡೆದು ಕೆಡವಿದ ಪಾಂಡವರಿಗೆ ಬಂದ ಅಪಕೀರ್ತಿಗಿಂತ ಹೆಚ್ಚೇನೂ ಅಲ್ಲವಲ್ಲ!" ಎಂದು ಬುದ್ಧಿವಂತಿಕೆಯ ಮಾತನ್ನಾಡಿದನು. ಈ ಮಾತು ವಿನಯಂಧರನಿಗೆ ಸಮಾಧಾನ ತರಲಿಲ್ಲ. ಅವನು, "ಮಹಾರಾಜ, ತಾವು ಇದನ್ನು ಹೀಗೆ ಭಾವಿಸಬಾರದು. ತಮ್ಮ ಪರಾಕ್ರಮವು ಎದುರಿಲ್ಲದುದು. ಅದರಿಂದಲೆ ನಾನು ಹೀಗೆ ಅರಿಕೆ ಮಾಡಿದುದು" ಎಂದು ಹೇಳಿದನು. ಆಗ ದುರ್ಯೋಧನನಿಗೆ ಕೋಪ ಬಂದಿತು. ದುರ್ವಿಧಿಚೋದಿತನಾಗಿ

ತಾನಾಡುವುದನ್ನು ತಾನೇ ಅರಿಯದೆ, "ಅದು ಹೀಗೆಯೇ ವಿನಯಂಧರ; ಒಡಹುಟ್ಟಿದವರು, ಗೆಳೆಯರು, ಪರಿವಾರದವರು, ಬಂಧುಮಿತ್ರರು—ಎಲ್ಲ ರೊಡಗೂಡಿದ ದುರ್ಯೋಧನನನ್ನು ಪಾಂಡುಸೂನುವು ಮೃತಿಯೊಂದಿಸದೆ ಬಿಡನು" ಎಂದು ವ್ಯತ್ಯಸ್ತವಾಗಿ ಹೇಳಿದನು. ಸ್ವಾಮಿಭಕ್ತನಾದ ವಿನಯಂಧರನು ಅಪಶಕುನವಾಯಿತೆಂದು ನಡುಗಿದನು. ದುರ್ಯೋಧನ ನಿಗೆ ತಾನಾಡಿದ ಮಾತಿನ ಅರ್ಥವು ಆಗ ಹೊಳೆಯಿತು. ಆದರೂ ದುರಭಿಮಾನವನ್ನು ಬಿಡದೆ, ತಾನಾಡಿದ ಅವಾಚ್ಯಕ್ಕಳುಕದೆ, ಭಾನುಮತಿಯು ಎಂದಿನಂತೆ ತನ್ನೊಡನೆ ಸವಿನುಡಿಯಾಡದೆ ಶಯ್ಯಾಗೃಹ ವನ್ನು ಬಿಟ್ಟು ಹೊರಟುಹೋಗಿದ್ದುದರಿಂದ ತನ್ನ ಮನಸ್ಸು ಕದಡಿ ಮಾತು ಹಾಗೆ ಹೊರಳಿತೆಂದು ಸಮಾಧಾನ ಹೇಳಿ, ರಥವನ್ನು ಸಿದ್ಧಗೊಳಿಸೆಂದು ವಿನಯಂಧರನನ್ನು ಕಳುಹಿಸಿ, ಉದ್ಯಾನದಲ್ಲಿ ಗೆಳತಿಯರೊಡನೆ ಕುಳಿತಿದ್ದ ಮಡದಿಯನ್ನು ಕಂಡು, ತಾನು ಆಕಡೆ ಹೋದನು.

ಭಾನುಮತಿಯನ್ನು ಸಮೀಪಿಸುವ ವೇಳೆಗೆ, ಅವಳು ದುಃಸ್ವಪ್ನ ವನ್ನು ಗೆಳತಿಯರಿಗೆ ಹೇಳುತ್ತಿದ್ದಳು. "ಲೋಕದಲ್ಲಿ ಗೆಳೆಯರು ಅಪ್ರಿಯ ವನ್ನು ಪ್ರಿಯವಾಗುವಂತೆ ಹೇಳುವರು ; ಹೇಳಿದರೇನಂತೆ" ಎಂದುಕೊಂಡು ಗೆಳತಿಯರು, "ದೇವಿ, ಈ ಸ್ವಪ್ನ ಶುಭಸೂಚಕವಾಗಿಲ್ಲ. ಕನಸಿನಲ್ಲಿ ಮುಂಗಸಿ, ನೂರು ಹಾವುಗಳ ಮರಣ—ಇವನ್ನು ಕಾಣಬಾರದೆಂಬ ಸಂಗತಿ ಶಾಸ್ತ್ರೋಕ್ತವೆಂದು ನಾವು ಕೇಳಿಬಲ್ಲೆವು. ದೇವ ಬ್ರಾಹ್ಮಣರನ್ನು ಆರಾಧಿಸಿ ಶಾಂತಿ ಗಳಿಸುವುದು ಲೇಸು" ಎಂದರು. ದುರ್ಯೋಧನನಿಗೆ ದೂರ ದಿಂದಲೆ ಈ ಮಾತುಗಳು ಕೇಳಿಸಿದುವು. ಶುಭಾಶುಭ ಸೂಚಕವಾದ ಸ್ವಪ್ನಗಳು ಲೋಕದಲ್ಲಿ ಯಾರಿಗಾದರೂ ಬೀಳಬಹುದು. ಆದರೂ 'ನೂರು' ಎಂಬ ಈ ಸಂಖ್ಯೆ ನಮ್ಮನ್ನೇ ಕುರಿತಂತಿದೆ ಎಂದು ಅವನು ಯೋಚಿಸುತ್ತಿದ್ದಂತೆಯೆ ಎಡಗಣ್ಣದುರಿತು ; ಮನಸ್ಸು ಕ್ಷೋಭೆಗೊಂಡಿತು. ಆದರೂ ಅವನು ಸಹಜವಾದ ತನ್ನ ಗರ್ವದಿಂದ "ದುರ್ನಿಮಿತ್ತಗಳು ಎಲ್ಲಿಯೋ ಕಾಕತಾಳೀಯವಾಗಿ ಒಂದೊಂದು ವೇಳೆ ಫಲಿಸುತ್ತವೆ ಎಂದು ಅಂಗಿರಸನು ಹೇಳಿರುವನು. ಅಂಜುಕುಳಿಗಳನ್ನು ಹೆದರಿಸುವ ಈ ದುರ್ನಿಮಿತ್ತಗಳಿಗೆ ದುರ್ಯೋಧನನು ಅಳುಕುವನೆ ?" ಎಂದು

ಧೃತಿದುಂಬಿ, ಭಾನುಮತಿಗೂ ಧೈರ್ಯ ಹೇಳಿ ಸಂತಯಿಸಲು ಮುಂದುವರಿದನು.

ಈ ಹೊತ್ತಿಗೆ ಸೂರ್ಯಭಗವಂತನು ಉದಯಗಿರಿ ಶಿಖರಾಂತರ ಮುಕ್ತರಥನಾಗಿ, ವಿಗಳಿತ ಸಂಧ್ಯಾರಾಗ ಪ್ರಸನ್ನತರಾಲೋಕಮಂಡಲ ನಾಗಿ ಮೇಲಕ್ಕೆ ಬಂದನು. ಪೂಜಾಕಾಲವಾದ್ದರಿಂದ ಭಾನುಮತಿಯು ರಕ್ತಚಂದನ ರಕ್ತಪುಷ್ಪ ಮಿಶ್ರಿತವಾದ ಅರ್ಘ್ಯವನ್ನಾತನಿಗಿತ್ತು, ಇತರ ದೇವತೆಗಳಿಗೂ ಪೂಜೆ ಸಲ್ಲಿಸಲು ಪುಷ್ಪಪಾತ್ರೆಯನ್ನು ತಾರೆಂದು ಸಖಿಗೆ ಬೆಸಸಿದಳು. ದುರ್ಯೋಧನನು ಇದೇ ಸಮಯವೆಂದು ಮುಂದಕ್ಕೆ ಹೋಗಿ, ಸಖಿಯರನ್ನು ಸಂಜ್ಞೆಯಿಂದಲೇ ದೂರ ಕಳುಹಿಸಿ, ಆ ಪಾತ್ರೆ ಯನ್ನು ತಾನು ತೆಗೆದುಕೊಂಡು ಭಾನುಮತಿಯ ಬಳಿಸಾರಿದನು. ಅವಳು ಹೂ ಕೊಳ್ಳುವಾಗ ಸುಖಸ್ಪರ್ಶದಿಂದವನಿಗೆ ರೋಮಾಂಚವಾಗಿ, ಕೈಯಲ್ಲಿದ್ದ ಪುಷ್ಪಪಾತ್ರೆಯು ಕೆಳಕ್ಕೆ ಬಿದ್ದುಹೋಯಿತು. ದುಃಸ್ವಪ್ನಫಲ ನಿವಾರಣೆಯ ಪ್ರಯತ್ನದಲ್ಲಿ ಮತ್ತೆ ಅಪಶಕುನ! ಭಾನುಮತಿಯು ತಲ್ಲಣಿಸಿ ಹೋದಳು. ಚೇಟಿಯ ಅಜಾಗರೂಕತೆಯು ಇದಕ್ಕೆ ಕಾರಣವೆಂದು ಹಿಂತಿರುಗಿ ನೋಡಲು, ಎದುರಿಗಿದ್ದವನು ಆರ್ಯಪುತ್ರನೇ. ಏಕಕಾಲ ದಲ್ಲಿಯೆ ಅವಳಿಗೆ ಭಯ ಲಜ್ಜೆಗಳುಂಟಾದುವು. ಏನು ಹೇಳುವುದಕ್ಕೂ ತೋರಲಿಲ್ಲ. ಬಹಳ ಕಷ್ಟದಿಂದ "ಆರ್ಯಪುತ್ರ, ಅನುಮಾನವು ಬಲವಾಗಿ ಬಾಧಿಸುತ್ತಿದೆ. ಈಗ ನಾನು ನಿಯಮದಲ್ಲಿದ್ದೇನೆ. ಅದನ್ನು ನೀನೂ ಪಾಲಿಸಬೇಕು" ಎಂದಳು. ದುರ್ಯೋಧನನು ಅವಳ ಸ್ವಪ್ನವೃತ್ತಾಂತ ವೆಲ್ಲವನ್ನೂ ತಾನು ತಿಳಿದ ಬಗೆಯನ್ನು ವಿವರಿಸಿ, ಅವಳ ಅನುಮಾನವನ್ನು ಪರಿಹರಿಸಲೆತ್ನಿಸಿದನು. ಭಾನುಮತಿಯು "ಆರ್ಯಪುತ್ರ, ನಿನ್ನ ಮನೋರಥ ಸಿದ್ಧಿಗಾಗಿಯೇ ನಾನು ನಿಯಮವನ್ನು ಪಾಲಿಸುತ್ತಿರುವುದು" ಎಂದರೂ ಅವನು, "ದೇವಿ, ದುರ್ಯೋಧನ ಕೇಸರೀಂದ್ರನ ಗೃಹಿಣಿಯಾದ ನೀನು ಹೀಗೆ ಅನುಮಾನಪಡುವಂತಾದರೆ ನಾಲ್ಕು ದಿಕ್ಕುಗಳನ್ನೂ ವ್ಯಾಪಿಸಿರುವ ನಮ್ಮ ಅಕ್ಷೋಹಿಣೀಸೇನೆಗಳಿದ್ದೇನು ಫಲ? ಆಚಾರ್ಯ ದ್ರೋಣ ರಿದ್ದೇನು, ಅಂಗರಾಜನಾದ ಕರ್ಣನ ಕೂರಂಬುಗಳಿಗೆ ಪ್ರಯೋಜನ ವೇನು? ಅನುಮಾನವನ್ನು ತೊರೆ. ನಿನ್ನೊಡನೆ ಸ್ವೇಚ್ಛೆಯಾಗಿ

ಇರಬೇಕೆಂಬುದಲ್ಲದೆ ನನಗೆ ಬೇರಾವ ಮನೋರಥವೂ ಇಲ್ಲ" ಎಂದು ಹೇಳಿದನು.

ಭಾನುಮತೀ ದುರ್ಯೋಧನರು ಹೀಗೆ ಮಾತನಾಡುತ್ತಿರುವಂತೆಯೆ ಅಪಶಕುನದ ಅಪರಾವತಾರವೊ ಎಂಬಂತೆ ಸುಂಟುರುಗಾಳಿಯು ರಭಸದಿಂದ ಬೀಸಿ ಬಂದಿತು. ದೆಸೆ ದೆಸೆಯಲ್ಲಿದ್ದ ಹೆಮ್ಮರಗಳನ್ನು ಸೆಳಗಿಸಿ, ದೂಳೆಬ್ಬಿಸಿ, ಹುಲ್ಲು ಮಣ್ಣುಗಳನ್ನು ಗಗನಕ್ಕೆ ತೂರಿ, ದಂಡಾಕಾರವಾಗಿ ನಿಂತು ತಿರುಗುತ್ತ, ಶಾತ್ಕಾರ ಶಬ್ದಮಾಡುತ್ತಿರುವ ಆ ಚಂಡ ಸಮೀರನ ಆಟೋಪಕ್ಕೆ ಭೀರುವಾದ ಭಾನುಮತಿಯು ಬಹಳವಾಗಿ ಭಯಗೊಂಡಳು. ದುರ್ಯೋಧನನು ಅವಳನ್ನು ಮಂದಾರಪರ್ವತ ಪ್ರಸಾದಕ್ಕೆ ಕರೆತಂದನು. ಅಲ್ಲಿ ಸಂಟುರುಗಾಳಿಯ ಬಿರುಸು ಅಷ್ಟಾಗಿರಲಿಲ್ಲ. ಭಾನುಮತಿಯು ಸ್ವಲ್ಪ ಚೇತರಿಸಿಕೊಂಡಳು. ಇನ್ನೂ ಭಯದ ಸೋಕು ಹೋಗಿಲ್ಲದ ಅವಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಳ್ಳುವುದರಲ್ಲಿರಲು, "ದೇವಾ, ಮುರಿಯಿತು, ಮುರಿಯಿತು" ಎಂದುಕೊಂಡು ಕಂಚುಕಿಯು ಓಡಿಬಂದನು. ಮುರಿದುಹೋಗಿದ್ದುದು ದುರ್ಯೋಧನನ ರಣರಥದ ಧ್ವಜ. ಅದು ಹೇಷ್ಯಕ್ಕೆಂದು ಕಂಚುಕಿಯು ಹೆದರಿ ಸ್ವಾಮಿಭಕ್ತಿಯಿಂದ ಆ ಸುದ್ದಿ ತಿಳಿಸಲು, ದುರ್ಯೋಧನನು ರೇಗಿ, ಒಡನೆಯೇ ಸಮಾಧಾನವನ್ನೂ ತಂದುಕೊಂಡು, ಸುಮಿತ್ರನಿಗೆ ಹೇಳಿ ಸರಿಪಡಿಸಿ ಶಾಂತಿ ಮಾಡಿಸೆಂದು ಕಂಚುಕಿಯನ್ನು ಬೀಳ್ಕೊಟ್ಟನು.

ಕಂಚುಕಿಯು ಹಾಗೆ ಹೊರಟುಹೋಗುತ್ತಲೆ ಹೀಗೆ ದುರ್ಯೋಧನನ ತಂಗಿ ದುಶ್ಶೈಲೆಯೂ ಅವಳ ಅತ್ತೆಯೂ ಬಂದಿರುವುದಾಗಿ ಪ್ರತೀಹಾರಿಯು ಅರಿಕೆಮಾಡಿದನು. ಸಮರಾಂಗಣದಲ್ಲಿ ಅಭಿಮನ್ಯುವಿನ ಮರಣಕ್ಕೆ ದುಶ್ಶೈಲೆಯ ಗಂಡನಾದ ಸೈಂಧವನೇ ಮುಖ್ಯ ಕಾರಣನೆಂದು ತಿಳಿದ ಅರ್ಜುನನು ಅವನನ್ನು ಸೂರ್ಯಾಸ್ತದೊಳಗಾಗಿ ಸಂಹರಿಸುತ್ತೇನೆಂದು ಮಾಡಿದ ಪ್ರತಿಜ್ಞೆಯನ್ನು ಕೇಳಿ ಅವರಿಬ್ಬರೂ ಹೆದರಿ ರಕ್ಷಣೆಗಾಗಿ ದುರ್ಯೋಧನನಲ್ಲಿ ಮೊರೆಯಿಡಲು ಬಂದಿದ್ದರು. ದುರ್ಯೋಧನನೂ ಈ ವಿಷಯವನ್ನು ಮೊದಲೆ ಊಹಿಸಿದ್ದನು. ಅವರನ್ನು ಕರೆಯಿಸಿಕೊಂಡು, ದುಶ್ಶೈಲೆಯನ್ನು ಕುರಿತು, "ತಂಗಿ, ದುಃಖಿಸಬೇಡ. ಅರ್ಜುನನು ಈ

ಪ್ರತಿಜ್ಞೆಯನ್ನು ಖಂಡಿತವಾಗಿಯೂ ಈಡೇರಿಸಿಕೊಳ್ಳಲಾರ. ಆದರಿಂದ ಅವನೇ ಮಡಿಯುತ್ತಾನೆ. ಅವನೊಬ್ಬನು ಮಡಿದರೆ ಉಳಿದೆಲ್ಲ ಪಾಂಡವರೂ ಮಡಿದಂತೆ. ಇದು ಸಂತೋಷಪಡಬೇಕಾದ ವಿಷಯ; ದುಃಖಿಸಬಾರದು'' ಎಂದು ಸಮಾಧಾನಪಡಿಸಿದನು. ಆಗ ಭಾನುಮತಿಯು "ಆರ್ಯಪುತ್ರ, ಅರ್ಜುನನ ಪ್ರತಿಜ್ಞೆಯಾದುದರಿಂದ ಸಂದೇಹಕ್ಕೆಡೆಯುಂಟು'' ಎನ್ನಲು ದುರ್ಯೋಧನನು ಕೆರಳಿ, "ಅಹಹ! ಪಾಂಡವರೂ ನನಗೆ ಸಂದೇಹಸ್ಥಾನವೆ? ಮೊದಲಿಂದಲೂ ಪಾಂಡವರ ಪ್ರಭಾವವನ್ನರಿತೇ ಇರುವ ನೀನೂ ಹೀಗೆ ಭಯಪಡುವುದೆ? ಈ ವರೆಗೆ ಅವರು ಇಂತಹ ಎಷ್ಟೊಂದು ಪ್ರತಿಜ್ಞೆಗಳನ್ನು ಮಾಡಿಲ್ಲ? ದುಶ್ಶಾಸನನ ರಕ್ತವನ್ನು ಹೀರುವೆನೆಂದರು; ಈ ದುರ್ಯೋಧನನ ತೊಡೆಗಳನ್ನು ಮುರಿಯುವೆನೆಂದರು. ಈಡೇರಿಸಿಕೊಂಡರೆ? ಆ ಪ್ರತಿಜ್ಞೆಗಳೊಂದಿಗೆ ಇದೂ ಒಂದು; ಇರಲಿ'' ಎಂದು ಅಲ್ಲಗಳೆದು, ಅರ್ಜುನನ ಪ್ರತಿಜ್ಞೆಯನ್ನು ಭಂಗಗೊಳಿಸಲು ಆಗಲೆ ಸಿದ್ಧವಾಗಿದ್ದ ಜೈತ್ರರಥವನ್ನೇರಿ ರಣರಂಗಕ್ಕೆ ತೆರಳಿದನು.

ಇತ್ತ ರಣಾಂಗಣದಲ್ಲಿ ದುರ್ಯೋಧನ ಪಕ್ಷಪಾತಿಗಳಾದ ದ್ರೋಣರು ಸೈಂಧವನನ್ನು ಅರ್ಜುನನ ಕಣ್ಣಿಗೆ ಕಾಣಿಸದಂತೆ ವ್ಯೂಹಮಧ್ಯದಲ್ಲಿ ನಿಲ್ಲಿಸಿ ತಾವೇ ಸೇನಾಮುಖದಲ್ಲಿ ನಿಂತು ಶತ್ರುವೀರರನ್ನು ಎದುರಿಸಿ ಕಾದಿದರು. ಅರ್ಜುನನೂ ಸಹ ಗುರುಗಳ ಪರಾಕ್ರಮಕ್ಕೆ ಹಿಂಜರಿಯದೆ ಮುನ್ನುಗ್ಗಿ ಪ್ರತೀಕಾರಮಾಡುತ್ತ ವ್ಯೂಹದ ನಾಲ್ಕೂ ಕಡೆಗಳಲ್ಲಿ ಸಂಚರಿಸಿ ಜಯದ್ರಥನನ್ನು ಹುಡುಕಿಯೂ ಕಾಣದೆಹೋದನು. ತನ್ನ ಪ್ರತಿಜ್ಞೆಗೆ ಭಂಗಬರುವುದೆಂದು ಅವನಿಗೆ ತಿಳಿಯಿತು. ಶರಣ್ಯನಾದ ಶ್ರೀ ಕೃಷ್ಣನೇ ಅವನಿಗೆ ಆಗಲೂ ಶರಣು ಕೊಟ್ಟನು. ಅವನ ಕಪಟದಿಂದ ಒಳಗಡಗಿದ್ದ ಜಯದ್ರಥನು ಬಹು ಸುಲಭವಾಗಿ ಅರ್ಜುನನ ಕಣ್ಣಿಗೆ ಬಿದ್ದು ಯಮಾಲಯವನ್ನು ಸೇರಿದನು.

ಹೀಗೆ ಅರ್ಜುನನು ತೀರ್ಣಪ್ರತಿಜ್ಞನಾದನು. ಅವನ ಈ ವಿಜಯದಿಂದ ಪಾಂಡವರು ಉತ್ಸಾಹಿತರಾಗಿ ಘಟೋತ್ಕಚನ ಮೂಲಕ ರಾತ್ರಿಯುದ್ಧವನ್ನೂ ಹೂಡಿದರು. ಗಗನಚಾರಿಯಾಗಿ ಪರಾಕ್ರಮವನ್ನು

ಮೆರೆಯುತ್ತಿದ್ದ ಘಟೋತ್ಕಚನನ್ನು ಕಂಡು ಕೌರವರು ತತ್ತಳಿಸಿ ಹೋದರು. ಆಗ ಮಹಾರಾಜನಾದ ದುರ್ಯೋಧನನು ಅಂಗರಾಜನನ್ನು ಪ್ರಾರ್ಥಿಸಿ ಆ ಭೀಮಸೂನುವನ್ನು ಗತಾಸುವನ್ನಾಗಿ ಮಾಡಿಸಿದನು. ಅಂತೆಯೇ ಯುದ್ಧವು ಮುಂದುವರಿದು ಪಾಂಡವರ ಕಡೆ ವಿರಾಟ ದ್ರುಪದರೇ ಮೊದಲಾದ ನರಾಧಿಪರೂ, ಕೌರವರ ಕಡೆ ಭಗದತ್ತ ಭೂರಿಶ್ರವಾದಿಗಳೂ ದೇವಲೋಕವನ್ನು ಸೇರಿದರು. ಹೀಗೆ ಉಭಯ ಸೇನೆಗಳಲ್ಲಿಯೂ ರಾಸಿರಾಸಿಯಾಗಿ ಮಡಿದುಬಿದ್ದಿದ್ದ ವೀರರ ಅಸೃ ಙ್ಮೇದೋಮಾಂಸಗಳ ಆಸೆಯಿಂದ ಅಸುರ ಮಿಥುನಗಳು ಅಲೆದಾಡ ತೊಡಗಿದುವು.

ಅತ್ತ ಭೀಮಾರ್ಜುನರೂ ಶ್ರೀ ಕೃಷ್ಣನೂ ದ್ರೋಣರನ್ನು ನಿಗ್ರಹಿಸಿದ ಹೊರತು ಕೌರವರ ಬಲವು ಕುಗ್ಗದೆಂದು ಯೋಚಿಸಿ ಸಂಚುಮಾಡಿ ಸತ್ಯಸಂಧನೂ ಅಜಾತಶತ್ರುವೂ ಆದ ಧರ್ಮನಂದನನಿಂದ "ಅಶ್ವತ್ಥಾಮಾ ಹತಃ ಕುಂಜರಃ" ಎಂಬ ಮಾತುಗಳನ್ನಾಡಿಸಿ, 'ಕುಂಜರಃ' ಎಂಬ ಮಾತು ಅವನ ಬಾಯಿಂದ ಬರುವವೇಳೆಗೆ ರಣದುಂದುಭಿಗಳನ್ನು ಮೊಳಗಿಸಿ ಆ ಮಾತನ್ನು ಕೇಳಿಸದಂತೆ ಮಾಡಿದರು. ಪುತ್ರವತ್ಸಲರಾದ ದ್ರೋಣರಿಗೆ 'ಅಶ್ವತ್ಥಾಮಾ ಹತಃ' ಎಂಬಷ್ಟು ಮಾತು ಮಾತ್ರ ಕೇಳಿಸಿ, ಅವರು ಶಸ್ತ್ರತ್ಯಾಗಮಾಡಿ ದುಃಖಿಸುತ್ತಿರುವಲ್ಲಿಯೆ ದ್ರುಪದ ಪುತ್ರನಾದ ದೃಷ್ಟದ್ಯುಮ್ನನು ಅಸಹಾಯರೂ ದೀನರೂ ಆದ ಅವರ ಶಿಖೆಯನ್ನು ಹಿಡಿದು ತಲೆಯನ್ನು ತರಿದನು. ಅತಿ ಹೇಯವಾದ ಈ ಕಾರ್ಯವನ್ನು ನೋಡಿ ಅಲ್ಲಿದ್ದವರೆಲ್ಲರೂ ಹಾಹಾಕಾರ ಮಾಡಿದರು. ರಣಾಂಗಣವೆಲ್ಲವೂ ಭೀಕರ ಧ್ವನಿಯಿಂದ ತುಂಬಿಹೋಯಿತು.

ಈ ಮಹಾಧ್ವನಿಯು ಸಶಸ್ತ್ರನಾಗಿ ಶಿಬಿರದಲ್ಲಿದ್ದ ಅಶ್ವತ್ಥಾಮನಿಗೂ ಕೇಳಿಸಿತು. ಅವನು ತನ್ನ ತಂದೆಯು ದುರ್ಯೋಧನನಲ್ಲಿ ದಯೆಗೊಂಡು ಪಾಂಡವರಲ್ಲಿಯ ಶಿಷ್ಯಪ್ರೇಮವನ್ನು ಬದಿಗಿಟ್ಟು ಅತುಲಪರಾಕ್ರಮವನ್ನು ವಿಜೃಂಭಿಸಿರುವುದರಿಂದಲೇ ರಣರಂಗದಲ್ಲಿ ಈ ಮಹಾಧ್ವನಿಯುಂಟಾಗಿರ ಬೇಕೆಂದು ಊಹಿಸಿದನು. "ನಮ್ಮ ತಂದೆ, ದ್ರೋಣರೇನು ಸಾಮಾನ್ಯರೆ? ಪರಶುರಾಮರ ಪ್ರಿಯ ಶಿಷ್ಯರಾಗಿ, ಅವರಿಂದ ಮಹಾಸ್ತ್ರವನ್ನು

ಅನುಗ್ರಹವಾಗಿ ಪಡೆದು, ಎಲ್ಲ ಧನುಷ್ಮಂತರಿಗೂ ಅಧಿಪತಿಗಳೆನಿಸಿದವರು'' ಇಂತಹ ಮಹಾವೀರರು ಹಗೆಗಳನ್ನು ಧೂಳೀಪಟಲಮಾಡಲು ಆರಂಭಿಸಿರುವರೆಂದು ಅವನ ಹೆಮ್ಮೆ. ರಥದ ಮಾತಂತಿರಲಿ ಸಶಸ್ತ್ರನೇ ಆಗಿರುವುದರಿಂದ ಕೂಡಲೆ ಸಮರಭೂಮಿಗೆ ನುಗ್ಗಲು ಅವನ ಮನಸ್ಸು ಓಡುತ್ತಿದ್ದಿತು. ದ್ರೋಣರ ಸ್ಥಿತಿಯು ಅವನಿಗೆ ತಿಳಿಯದು. ಉತ್ಸಾಹದಿಂದ ಮುಂದುವರಿದು ನೋಡುತ್ತಾನೆ. ಅತಿರಥ ಮಹಾರಥರಾದ ಕರ್ಣ ಕೃಪಾದಿಗಳೆಲ್ಲರೂ ಪರಾಙ್ಮುಖರಾಗಿ ಓಡಿಬರುತ್ತಿರುವ ದೃಶ್ಯವು ಅವನ ಕಣ್ಣಿಗೆ ಬಿದ್ದಿತು. ತಡೆದು ನಿಲ್ಲಿಸಬೇಕೆಂಬ ಉತ್ಸಾಹವು ಅವನಲ್ಲಿ ಮೂಡಿತು. ಕ್ಷಾತ್ರಧರ್ಮಕ್ಕೂ ಕುಲಯಶಸ್ಸಿಗೂ ಕಲಂಕ ತಂದುಕೊಂಡು ಪಲಾಯನವಾಗಿ ಬರುತ್ತಿರುವ ಅವರನ್ನು ಕುರಿತು, "ಎಲೈ ಕೌರವ ಸೇನಾಸಂರಕ್ಷಕರಾದ ನರಪತಿಗಳೇ, ಸಾಕು ಸಾಕು. ಈ ಸಮರಪರಿತ್ಯಾಗ ಸಾಹಸವನ್ನು ನಿಲ್ಲಿಸಿರಿ. ಜೀವಿಗೆ ಮರಣವೇ ಧ್ರುವವೆಂದರಿತೂ ಕೀರ್ತಿಗೆ ಕಳಂಕ ತಂದುಕೊಳ್ಳುವುದೆ? ಸಕಲ ಧನ್ವೀಶ್ವರರಿಗೂ ಗುರುವಾದ ನಮ್ಮ ತಂದೆ, ದ್ರೋಣರು ಸೇನಾಪತಿಯಾಗಿರುವಲ್ಲಿ ನೀವು ಹೀಗೆ ಹೆದರಿ ಪಲಾಯನವಾಗಬೇಕೆ? ಹಿಂತಿರುಗಿರಿ," ಎಂದನು.

ಇಷ್ಟರಲ್ಲಿ "ಅಕ್ಕಟಾ, ಇನ್ನೂ ನಿನ್ನ ತಂದೆ ಎಲ್ಲಿರುವರು?" ಎಂಬ ಮಾತು ಅವನ ಕಿವಿಗೆ ಬಿದ್ದಿತು. ಇದು ಭೀರುಗಳಾಡಿದ ನುಡಿಯೆಂದು ಅವನಿಗೆನ್ನಿಸಿತು. ಹಾಗೆ ನುಡಿದವರ ನಾಲಗೆಯು ಸಾವಿರ ಹೋಳಾಗಲಿಲ್ಲವೇಕೆಂದು ಅವನು ಖತಿಗೊಂಡನು. ಅಷ್ಟು ಹೊತ್ತಿಗೆ ದ್ರೋಣರ ಸಾರಥಿಯಾದ ಅಶ್ವಸೇನನು ಅಲ್ಲಿಗೆ ಸಂಭ್ರಾಂತನಾಗಿ ಬಂದು ಅಶ್ವತ್ಥಾಮನ ಅಡಿಗೆರಗಿ ರಕ್ಷಣೆ ಬೇಡಿದನು. ಮೂರು ಲೋಕಗಳನ್ನೂ ರಕ್ಷಿಸಲು ಸಮರ್ಥರಾದ ತಂದೆ ದ್ರೋಣರಿಗೆ ಸಾರಥಿಯಾಗಿದ್ದೂ ತನ್ನ ರಕ್ಷಣೆಯನ್ನು ಬೇಡಿದ ಅಶ್ವಸೇನನನ್ನು ನೋಡಿದೊಡನೆಯೇ ಅಶ್ವತ್ಥಾಮನಿಗೆ ತಂದೆಯ ಯೋಗಕ್ಷೇಮದ ವಿಚಾರದಲ್ಲಿ ಸಂಶಯ ತಲೆದೋರಿತು. ಅಶ್ವಸೇನನು ನಡೆದ ಸಂಗತಿಯೆಲ್ಲವನ್ನೂ ತಿಳಿಸಿದನು. ಯುಧಿಷ್ಠಿರನಂತಹ ಸತ್ಯವಂತನು ಸಟೆಯಾಡಿ ಆಚಾರ್ಯನ ನಿಧನಕ್ಕೆ ನಿದಾನನಾದುದು

ತನ್ನ ದೌರ್ಭಾಗ್ಯವೆಂದೇ ಅವನು ಮನಮುರುಗಿ ಮೂರ್ಛೆಹೋದನು. ಮತ್ತೆ ಎಚ್ಚರಗೊಂಡು ಭೀಮಾರ್ಜುನರೋ ವಾಸುದೇವನೋ ದ್ರೋಣರನ್ನು ಆ ಸ್ಥಿತಿಗೆ ತಂದಿರಬಹುದೆ ಎಂದು ಯೋಚಿಸುತ್ತಿರಲು ಅವರ ಪರಾಕ್ರಮವನ್ನು ಮೀರಿದ ತಂದೆಯನ್ನು ದುರ್ಬಲನಾದ ದೃಷ್ಟದ್ಯುಮ್ನನು ಎದುರಿಸಿದನೆಂದು ಕೇಳಿದಮೇಲೆ ಅವನ ದುಃಖವಿಮ್ಮಡಿಸಿತು. ಅಷ್ಟರಲ್ಲಿಯೆ ಆಚಾರ್ಯ ಕೃಪರು ಸೋದರಳಿಯನಾದ ಅವನನ್ನು ಸಮಾಧಾನಗೊಳಿಸಲು ಅಲ್ಲಿಗೆ ಬಂದರು. ಸುತವತ್ಸಲನಾದ ತಂದೆಯನ್ನೇ ಅನುಸರಿಸುವೆನೆನ್ನುತ್ತ ಮಿತಿಮೀರಿ ದುಃಖಿಸುತ್ತಿದ್ದ ಅವನನ್ನು ಕಂಡು ಅವರು, "ವತ್ಸ, ತಂದೆಯನ್ನು ಅನುಸರಿಸುವುದು ಹೀಗಲ್ಲ. ಬಾಳಿ ಬದುಕಿ ನಿವಾಪಾಂಜಲಿದಾನದಿಂದಲೂ ಶ್ರಾದ್ಧಕರ್ಮದಿಂದಲೂ ನೀನಾತನನ್ನು ಅನುಸರಿಸಬೇಕು" ಎಂದು ಮೊದಲಾಗಿ ಉಪದೇಶಿಸಿದರು. ಆ ಹೊತ್ತಿಗೆ ದೃಷ್ಟದ್ಯುಮ್ನನು ದ್ರೋಣರ ಚಂಡಿಕೆಯನ್ನು ಹಿಡಿದು ತಲೆ ತರಿದು ಶಿಬಿರಕ್ಕೆ ಹಿಂತಿರುಗುತ್ತಿರುವ ಸಂಗತಿಯು ಕೂಗು ಸಮರಾಂಗಣದಿಂದ ಕೇಳಬಂದಿತು. ಈ ನೀಚಕಾರ್ಯವನ್ನು ವೀರರು ಮಾತ್ರವಲ್ಲದೆ ಶಿಷ್ಯರಾದ ಪಾಂಡವರೂ ಶ್ರೀಕೃಷ್ಣನೂ ನೋಡಿಯೂ ತಟಸ್ಥರಾಗಿದ್ದುದಕ್ಕೆ ಅಶ್ವತ್ಥಾಮನಿಗುಂಟಾದ ದುಃಖ ಅಷ್ಟಿಷ್ಟಲ್ಲ. ಕಡೆಗೆ ಈ ದುಃಖವು ರೋಷವಾಗಿ ಪರಿಣಮಿಸಿತು. ಕೂಡಲೆ ಆ ಕೃತ್ಯವನ್ನು ಮಾಡಿದ, ಒಪ್ಪಿದ, ನೋಡಿದ, ನಾಚಿಕೆಗೆಟ್ಟ ಮನುಜಪಶುಗಳನ್ನು ಮಾತ್ರವಲ್ಲದೆ ಭೀಮಾರ್ಜುನರನ್ನೂ ನರಕರಿಪುವಾದ ಕೃಷ್ಣನನ್ನೂ ಕೊಂದು ಅವರ ರಕ್ತ ಮೇದಸ್ಸು ಮಾಂಸಗಳಿಂದ ದಿಗ್ಬಲಿ ಕೊಡುವುದಾಗಿ ರೇಗಿದನು. ಮೇಲೆ ಮೇಲೆ ಉಕ್ಕಿಬರುತ್ತಿದ್ದ ಕೋಪ ರೋಷಗಳಿಂದ ಅವನು ರಥವೇರಿ ಕೂಡಲೆ ಸಮರಭೂಮಿಗೆ ಹೋಗುವುದಾಗಿ ಸಂಕಲ್ಪಿಸಿದನು. ಆಗ ಕೃಪರು, "ವತ್ಸ, ಭೀಷ್ಮ ದ್ರೋಣರಿಬ್ಬರೂ ಇಲ್ಲದಿರುವ ಕೌರವ ಸೇನೆಗೆ ಎಲ್ಲ ಬಗೆಯಲ್ಲಿಯೂ ಅವರಿಗೆ ಸಮಾನಬಲನಾದ ನೀನೇ ನಾಯಕನಾಗಬೇಕು. ಮಹಾರಾಜ ದುರ್ಯೋಧನನೂ ನಿನಗೆ ಆ ಪಟ್ಟವನ್ನು ಕಟ್ಟುವುದಕ್ಕೆ ಸಂಭಾರಗಳೆಲ್ಲವನ್ನೂ ಸಿದ್ಧಗೊಳಿಸಿ ಕಾದಿರುವನೆಂದು ನನ್ನ ನಂಬುಗೆ. ಉಚಿತವಾದ ಪದವಿಯನ್ನಲಂಕರಿಸಿ

ನೀನು ಸಮರಕ್ಕೆ ಹೋಗುವುದು ನನಗೆ ಸರಿ ಎನ್ನಿಸುತ್ತದೆ'' ಎಂದು ತಿಳಿಸಿದನು. ಪರಾಧೀನದ ಆ ಪದವಿಯನ್ನು ಕೋರುವುದು ಅಶ್ವತ್ಥಾಮನ ಮನಸ್ಸಿಗೆ ಅಷ್ಟಾಗಿ ಸರಿಬೀಳಲಿಲ್ಲ. ಆದರೂ ಕೃಪಾಚಾರ್ಯರ ಒತ್ತಾಯ ದಿಂದ ಅವನು ಕುರುರಾಜನನ್ನು ಕಾಣಲು ಹೊರಟನು.

ಇತ್ತ ಕುರುರಾಜ ದುರ್ಯೋಧನನು ಅಂಗರಾಜನೊಡನೆ ನ್ಯಗ್ರೋಧ ವೃಕ್ಷದ ಕೆಳಗೆ ಕುಳಿತು ದ್ರೋಣವಧೆಯ ವಿಷಯವನ್ನೇ ಮಾತನಾಡುತ್ತಿದ್ದನು. ''ಎಂತಹವನಾದರೂ ವಿಪತ್ತು ಒದಗಿದಾಗ ಆಯುಧವನ್ನು ಹಿಡಿದು ಅಪಕಾರಿಗೆ ತಕ್ಕ ಪ್ರತೀಕಾರ ಮಾಡಿ ದುಃಖವನ್ನು ತೀರಿಸಿಕೊಳ್ಳುವುದು ಲೋಕದಲ್ಲಿ ಸಹಜ. ದ್ರೋಣರು ಅಂತಹ ಸಮಯದಲ್ಲಿ ಶಸ್ತ್ರಪರಿತ್ಯಾಗಮಾಡಿದರು. ಬ್ರಾಹ್ಮಣರಾದುದರಿಂದ ದುಃಖವೇ ಮೀರಿಬಂದು ಏನು ಮಾಡುವುದಕ್ಕೂ ತೋರದೆ ಕಠಿನವಾದ ಕ್ಷಾತ್ರಧರ್ಮವನ್ನು ತೊರೆದು ಅವರು ತಮ್ಮ ಹುಟ್ಟುಗುಣವಾದ ಮಾರ್ದವವನ್ನು ಹೊಂದಿರಬೇಕು; ಯಾರಾದರೇನು? ಹುಟ್ಟುಗುಣವನ್ನು ಬಿಡಲಾದೀತೆ?'' ಎಂದು ದುರ್ಯೋಧನನು ಕರ್ಣನಿಗೆ ಹೇಳಿದನು. ಕರ್ಣನು, ''ಮಹಾರಾಜ, ಹಾಗಲ್ಲ. ಆಚಾರ್ಯರ ಶಸ್ತ್ರಪರಿತ್ಯಾಗಕ್ಕೆ ಬೇರೆ ಕಾರಣವುಂಟು. ಅಶ್ವತ್ಥಾಮನಿಗೆ ರಾಜ್ಯಾಭಿಷೇಕಮಾಡಬೇಕೆಂಬುದು ಅವರ ಅಭಿಪ್ರಾಯವಾಗಿದ್ದಿತು. ಅವನು ಸತ್ತನೆಂಬ ಸುದ್ದಿ ಕೇಳಿ, ತಮ್ಮ ಮನೋರಥ ಚಕ್ರವು ಮುರಿಯಿತೆಂದು ಕೊರಗಿ ಯುದ್ಧ ಮಾಡದೆ ಅಸ್ತ್ರವನ್ನು ಕೆಳಗಿಟ್ಟು ಸುಮ್ಮನಾದರು. ಈ ಸಂಗತಿಯನ್ನು ನಾನೊಬ್ಬನೇ ಅಲ್ಲದೆ ತಿಳಿದವರೆಲ್ಲರೂ ಹೀಗೆಯೆ ಭಾವಿಸುತ್ತಾರೆ. ಹಾಗಲ್ಲದಿದ್ದರೆ ಅವರು ಸೈನಾಪತ್ಯವನ್ನು ವಹಿಸಿಯೂ ತಮ್ಮ ಕಡೆಯಲ್ಲಿ ಪ್ರಧಾನಪುರುಷರ ಕೊಲೆಯಾಗುತ್ತಿದ್ದರೂ ಉಪೇಕ್ಷೆಯಿಂದಿರುತ್ತಿದ್ದರೆ?'' ಎಂದು ಮೊದಲಾಗಿ ಅಲ್ಲಸಲ್ಲದ ಮಾತುಗಳನ್ನೆಲ್ಲ ಹೇಳಿ ಮೊದಲೆ ದ್ರೋಣರ ವಿಷಯದಲ್ಲಿ ಅಸಡ್ಡೆ ತಾಳಿದ್ದ ದುರ್ಯೋಧನನ ಮನಸ್ಸನ್ನು ಮತ್ತಷ್ಟು ಕೆಡಿಸಿದನು. ಇನ್ನೂ ಒಂದು ಹೆಜ್ಜೆ ಮುಂದೆಹೋಗಿ, ಅವನು ''ಮಹಾರಾಜ, ಇನ್ನೊಂದು ಸಂಗತಿಯೂ ಉಂಟು. ದ್ರುಪದನೂ ಈ ದ್ರೋಣರ ಅಭಿಪ್ರಾಯವನ್ನು ಬಾಲ್ಯದಿಂದ ಬಲ್ಲವನು. ಇಬ್ಬರೂ

ಸಹಾಧ್ಯಾಯಿಗಳು. ಅಂತಹವನು ಇವರ ಅಭಿಪ್ರಾಯವನ್ನು ಕಂಡೇ ಇವರನ್ನು ತನ್ನ ರಾಷ್ಟ್ರದಲ್ಲಿ ಇಟ್ಟುಕೊಳ್ಳಲಿಲ್ಲ" ಎಂದು ಹೇಳಿದನು. ದುರ್ಯೋಧನನಿಗೆ ಹೌದೆನ್ನಿಸಿತು. ಹಾಗಲ್ಲದಿದ್ದರೆ ಅತಿರಥರಾದ ಅವರು ಸಿಂಧುರಾಜನಿಗೆ ಅಭಯಕೊಟ್ಟು ಕಿರೀಟಿಯು ಅವನನ್ನು ವಧಿಸುತ್ತಿದ್ದರೂ ಅದನ್ನು ಉಪೇಕ್ಷಿಸುತ್ತಿದ್ದರೆ? ಎಂದುಕೊಂಡನು.

ಹೀಗೆ ಕರ್ಣದುರ್ಯೋಧನರು ಮಾತನಾಡಿಕೊಳ್ಳುತ್ತಿರುವಂತೆಯೆ ಕೃಪಾಶ್ವತ್ಥಾಮರು ಅಲ್ಲಿಗೆ ಬಂದರು. ದುರ್ಯೋಧನನು ಮಹಾ ತಂತ್ರಿ. ಅಂತರಂಗವನ್ನು ತೋರ್ಪಡಿಸಿಕೊಳ್ಳದೆ ದಿಗ್ಗನೆದ್ದು ಅವರಿಗೆ ಗೌರವ ವನ್ನು ತೋರಿದನು. ಕೃಪರಿಗೆ ನಮಸ್ಕರಿಸಿ, ವಿಶ್ವಾಸದಿಂದ ಅಶ್ವತ್ಥಾಮ ನನ್ನು ಆಲಿಂಗಿಸಿ, "ಗುರುಪುತ್ರ, ಆಚಾರ್ಯರ ನಿಧನದಿಂದುಂಟಾದ ಈ ದುಃಖವು ನಮ್ಮಿಬ್ಬರಿಗೂ ಸಮಾನವಾಗಿದೆ. ಅವರು ನಿನಗೆ ತಂದೆ ಯಾದರೆ ನನಗೆ ನನ್ನ ಪೂಜ್ಯಪಾದರ ಗೆಳೆಯ. ನಮ್ಮಿಬ್ಬರಿಗೂ ಅವರೇ ಶಸ್ತ್ರ ಗುರು" ಎಂದು ಮೊದಲಾಗಿ ಸಾಂತ್ವವಚನವನ್ನಾಡಿದನು. ದೊರೆಯ ಅಂತರಂಗವೇನು ಗೊತ್ತು ಅಶ್ವತ್ಥಾಮನಿಗೆ! "ಮಹಾರಾಜ, ನೀನು ನನ್ನಲ್ಲಿ ಇಷ್ಟೊಂದು ಪ್ರೇಮವನ್ನಿಟ್ಟಿರುವಾಗ ತಂದೆಯ ಮರಣಕ್ಕಾಗಿ ನಾನು ಖತಿಗೊಳ್ಳಬೇಕಾಗಿಲ್ಲ. ಆದರೂ ಈ ನಾನು ಜೀವಿಸಿರುವಂತೆಯೆ ತಂದೆಯ ಚಂಡಿಕೆಯನ್ನು ಅನಾಮಧೇಯನೊಬ್ಬನು ಹಿಡಿವಂತಾಯಿತು ಎಂದಮೇಲೆ ಪುತ್ರರನ್ನು ಪಡೆದವರು ಇನ್ನು ಮುಂದೆ ಅವರ ನೆರವು ತಮಗುಂಟೆಂದು ನೆಚ್ಚುವರೆ ಎಂದು ನನಗೆ ಅತಿ ದುಃಖವಾಗಿದೆ" ಎಂಬುದಾಗಿ ಅಶ್ವತ್ಥಾಮನು ಮರುಗಿದನು. ಈ ಮಾತನ್ನು ಕೇಳಿ ಕರ್ಣನು ವ್ಯಂಗ್ಯವಾಗಿ, "ಏನು ಮಾಡಲಾದೀತು? ಅಂತಹವರೇ ಶಸ್ತ್ರವನ್ನು ಕೆಳಗೆ ಹಾಕಿ ತಮ್ಮನ್ನು ತಾವೇ ಆ ದುರ್ದಶೆಗೆ ತಂದುಕೊಂಡ ರೆಂದಮೇಲೆ" ಎಂದು ನುಡಿದನು. ಈ ಮಾತು ಕಿವಿಗೆ ಬಿದ್ದಕೂಡಲೆ ಅಶ್ವತ್ಥಾಮನ ಮನಸ್ಸಿನಲ್ಲಿ ಹುದುಗಿದ್ದ ರೋಷಾಗ್ನಿಯು ಪ್ರಜ್ವಲಿಸಿತು. "ಏನು ಮಾಡಲಾಗುವುದೆಂದು ಹೇಳಿದೆಯ, ಕೇಳು ಕೇಳು. ಪಾಂಡವರ ಸೇನೆಯಲ್ಲಿ ತೋಳತೀಟಿಯಿಂದ ಯಾರು ಯಾರು ಶಸ್ತ್ರವನ್ನು ಹಿಡಿದು ನಿಂತಿರುವರೊ, ಪಾಂಚಾಲನ ಕುಲದಲ್ಲಿ ಕಿರಿಯನಾಗಲಿ

ಹಿರಿಯನಾಗಲಿ ಗರ್ಭಶಯ್ಯೆಯಲ್ಲಿರುವವನಾಗಲಿ ಯಾರು ಯಾರು ಇರುವರೊ, ನಮ್ಮ ತಂದೆಗೊದಗಿದ ಅಪಮಾನವನ್ನು ಯಾರು ಯಾರು ಕಣ್ಣಾರ ಕಂಡರೊ, ಯಾರು ಯಾರು ಕೊಬ್ಬಿ ರಣಾಂಗಣದಲ್ಲಿ ನನ್ನ ಕಣ್ಣಮುಂದೆ ಚರಿಸುವರೊ ಅವರೆಲ್ಲರಿಗೂ ಕ್ರೋಧಾಂಧನಾದ ನಾನು ಸಾಕ್ಷಾತ್ ಯಮನಂತೆ. ಯಮನಿಗೂ ಯಮನಂತೆ—ಎಂಬುದನ್ನು ತಿಳಿ'' ಎಂದು ವಿಜೃಂಭಿಸಿದನು. ಅನನ್ಯ ಸಾಧಾರಣವಾದ ಪರಾಕ್ರಮವುಳ್ಳ ಅಶ್ವತ್ಥಾಮನು ಅಂತಹವನೆಂದೇ ದುರ್ಯೋಧನನಿಗೂ ಗೊತ್ತು. ಆದರೂ ಅವನು ಮೇಲೆಮಾತ್ರ ತಲೆತೂಗಿ ಸುಮ್ಮನಾದನು. ಅಷ್ಟರಿಂದಲೆ ಕೃಪರು ಸೈನಾಪತ್ಯದ ಸುದ್ದಿಯನ್ನು ಎತ್ತಿ ಆ ಅಧಿಕಾರವನ್ನು ಅಶ್ವತ್ಥಾಮನಿಗೆ ಕೊಡಬೇಕೆಂದು ಹೇಳಿದರು. ದುರ್ಯೋಧನನು ಮುಚ್ಚುಮರೆಯಿಲ್ಲದೆ ತಾನು ಮೊದಲೆ ಕರ್ಣನಿಗೆ ಆ ಅಧಿಕಾರವನ್ನು ಕೊಟ್ಟಿರುವುದಾಗಿ ತಿಳಿಸಿದನು.

ದಾಕ್ಷಿಣ್ಯವಿಲ್ಲದೆ ಅಂಗರಾಜನಲ್ಲಿಯೆ ಪಕ್ಷಪಾತವನ್ನು ತೋರಿಸಿ ಅಶ್ವತ್ಥಾಮನನ್ನು ಉಪೇಕ್ಷಿಸಿದುದು ಕೃಪಾಚಾರ್ಯರ ಮನಸ್ಸಿಗೆ ಸರಿಬೀಳಲಿಲ್ಲ. ಅವರ ಮಾತೂ ವಿಫಲವಾಯಿತು. ಅಶ್ವತ್ಥಾಮನ ಮನಸ್ಸಿಗೂ ವ್ಯಥೆಯಾಯಿತು. ಅವನು ಮತ್ತೊಮ್ಮೆ ಪ್ರಯತ್ನಿಸೋಣವೆಂದು, ಮಹಾರಾಜದುರ್ಯೋಧನನು ಸುಖಶಯ್ಯೆಯಲ್ಲಿ ನಿರಾತಂಕವಾಗಿ ನಿದ್ರಿಸಿ ವಂದಿಮಾಗಧರ ಸ್ತೋತ್ರಪಾಠಗಳಿಂದ ಎಚ್ಚರಗೊಳ್ಳುವಷ್ಟರಲ್ಲಿ ಕೇಶವನಾಗಲಿ ಪಾಂಡವರಾಗಲಿ ಸೋಮಕರಾಗಲಿ ಉಳಿಯದಂತೆ ಮಾಡಿ, ತಾನು ಒಂದೇ ಇರುಳಿನಲ್ಲಿಯೆ ಬಾಹುಶಾಲಿಗಳ ರಣಕಥೆಯನ್ನು ಅಳಿಸಿ ಭೂಭಾರವನ್ನೇ ಕಳೆಯುವುದಾಗಿ ದುರ್ಯೋಧನನಿಗೆ ಆಶ್ವಾಸನವಿತ್ತನು. ಶೋಕರೋಷಗಳು ಮಿತಿಮೀರಿ ಅವನಿಂದ ಹೊರಟ ಈ ಮಾತು ಮಾನಿಯಾದ ವೀರ ಕರ್ಣನಿಗೆ ಕೋಪವನ್ನು ತಂದಿತು. ''ಆಡುವುದಕ್ಕೆ ಬಹು ಸುಲಭ. ಮಾಡುವುದು ಮಾತ್ರ ಕಷ್ಟ. ಕೌರವ ಬಲದಲ್ಲಿ ಈ ಕಾರ್ಯವನ್ನು ಮಾಡಲು ಅನೇಕರುಂಟು'' ಎಂದು ಮೂದಲಿಸಿ ನುಡಿದನು. ತಾನಾಡಿದುದು ಹೆಚ್ಚಾಯಿತೆಂದು ಅಶ್ವತ್ಥಾಮನಿಗೆ ಗೊತ್ತಾಗಿ, ''ಅಂಗರಾಜ, ನೀನು ಹೇಳಿದ್ದು ನಿಜ. ನಾನು ದುಃಖದಿಂದ

ದುಡುಕಿ ನುಡಿದೆ. ವೀರರನ್ನು ಅಲ್ಲಗಳೆಯಬೇಕೆಂದಲ್ಲ'' ಎಂದು ತನ್ನ ಅನುತಾಪವನ್ನು ಸೂಚಿಸಿದನು. ಕರ್ಣನಿಗೆ ಅಷ್ಟರಿಂದ ತೃಪ್ತಿಯಾಗಲಿಲ್ಲ. ''ದುಃಖಿತನಾದರೆ ಕಣ್ಣೀರಿಡಬೇಕು; ಕುಪಿತನಾದರೆ ರಣರಂಗಕ್ಕಿಳಿಯಬೇಕು. ಈ ವಿಧವಾದ ಜೊಳ್ಳುಮಾತುಗಳೇಕೆ?'' ಎಂದು ಚುಚ್ಚಿ ನುಡಿದನು. ಆ ವರೆಗೂ ಮುನಿಸನ್ನು ಮೆಟ್ಟಿದ್ದ ಅಶ್ವತ್ಥಾಮನು ಮುಳಿದುನಿಂತು, ''ಎಲಾ ಸೂತಾಪಸದ, ಅಶ್ವತ್ಥಾಮನಾದ ನನಗೂ ದುಃಖದಿಂದ ಪ್ರತಿಕ್ರಿಯೆಯನ್ನು ಸೂಚಿಸುತ್ತಿರುವೆಯಾ, ಶಸ್ತ್ರದಿಂದಲ್ಲವೆ? ಎಲವೊ, ಗುರುಶಾಪದಿಂದ ದೂಷಿತವಾದ ನಿನ್ನ ಆಯುಧದಂತೆ ನನ್ನ ಆಯುಧವೇನಾದರೂ ಬಲಗುಂದಿದೆಯೇ? ಪ್ರಕೃತದಲ್ಲಿ ನಿನ್ನ ಹಾಗೆ ನಾನೇನಾದರೂ ಹೆದರಿ ಹಿಂಜರಿದು ಕಳವನ್ನು ಬಿಟ್ಟು ಪಲಾಯನವಾಗಿ ಬಂದಿದ್ದೇನೆಯೆ? ಇಲ್ಲವೆ ನಿನ್ನ ಹಾಗೆ ನಾನು ಸ್ತೋತ್ರಪಾಠಗಳನ್ನೂ ಪಾರಂಪರ್ಯಗಳನ್ನೂ ಚೆನ್ನಾಗಿ ಹೇಳಲು ಕಲಿತಿರುವ ಸಾರಥಿಗಳ ಕುಲದಲ್ಲಿ ಹುಟ್ಟಿದ್ದೇನೆಯೆ? ಕೇವಲ ನೀಚನಾದ ಶತ್ರುವು ಮಾಡಿದ ಅಪಕಾರಕ್ಕೆ ನಾನು ದುಃಖದಿಂದ ಪ್ರತೀಕಾರಮಾಡಬೇಕೆ? ಶಸ್ತ್ರದಿಂದಲ್ಲವೊ?'' ಎಂದು ಬಹು ಬಿರುಸಿನಿಂದ ಕೆರಳಿ ಮಾತನಾಡಿದನು. ಆಗ ಕರ್ಣನು, ''ಎಲವೊ ಬಾಯಾಳಿ, ಶಸ್ತ್ರವನ್ನು ಹಿಡಿದಿದ್ದೇನೆಂಬ ಮಾತ್ರದಿಂದಲೆ ನೀನೀರೀತಿ ಕೊಬ್ಬಿ ಮಾತನಾಡಿದೆ. ನನ್ನ ಆಯುಧವು ನಿರ್ವೀರ್ಯವೊ ಸವೀರ್ಯವೊ ಏನಾದರೂ ಆಗಲಿ, ಮಹಾಪರಾಕ್ರಮಶಾಲಿಯಾದ ನಿನ್ನ ತಂದೆಯಂತೆ ನಾನದನ್ನು ಪಾಂಚಾಲಭೀತನಾಗಿ ತ್ಯಜಿಸಲಿಲ್ಲವಷ್ಟೆ. ಇದೂ ಅಲ್ಲದೆ, ಎಲವೊ, ನಾನು ಸೂತನೊ ಸೂತಪುತ್ರನೊ, ಅವನೊ ಇವನೊ, ಯಾವನೋ ಆಗಲಿ, ಕುಲದಲ್ಲಿ ಹುಟ್ಟು ಎಂಬುದು ದೈವಾಯತ್ತವಾದುದು. ಪೌರುಷ ಎಂಬುದು ಮದಾಯತ್ತವಾದುದು'' ಎಂದನು. ಅಶ್ವತ್ಥಾಮನಿಗೆ ಸಹಿಸಲಾಗಲಿಲ್ಲ. ''ಎಲಾ ರಥಕಾರಕುಲಕಲಂಕನೆ, ರಾಧಾಗರ್ಭಭಾರಭೂತ, ಆಯುಧಗಳ ಮರ್ಮಗಳನ್ನರಿಯದವನೆ! ನಮ್ಮ ತಂದೆ ಅಂಜುಗುಳಿಯೊ ಶೂರನೊ ಎಂಬುದನ್ನು ಈ ವಸುಧೆ ಬಲ್ಲುದು. ಆತನು ಶಸ್ತ್ರಗಳನ್ನೇಕೆ ತ್ಯಜಿಸಿದನೆಂಬುದಕ್ಕೆ ಪೃಥಾಸೂನುವಾದ ಯುಧಿಷ್ಠಿರನೇ ಸಾಕ್ಷಿ. ಆಗ ರಣಭೀರುವಾದ

ನೀನೆಲ್ಲಿದ್ದೆ ?'' ಎಂದು ಮಾತಿಗೆ ಮಾತು ಬೆಳೆಸಿದನು. ಹೀಗೆಯೆ ಮಾತಿಗೆ ಮಾತು ಬೆಳೆದು ಇಬ್ಬರಿಗೂ ಕಾವೇರಿತು. ಅಶ್ವತ್ಥಾಮನು ಕರ್ಣನನ್ನು ಎಡಗಾಲಿನಿಂದ ಒದೆಯಲು ಹೋದನು. ಕರ್ಣನು ಖಡ್ಗವನ್ನು ಹಿರಿದು ಆ ಕಾಲನ್ನೇ ತುಂಡರಿಸಲು ಮುನ್ನುಗ್ಗಿದನು. ಕೃಪ ದುರ್ಯೋಧನರಿಬ್ಬರೂ ಅಡ್ಡಬಂದು ಅವರನ್ನು ತಡೆದು ನಿಲ್ಲಿಸಿದರು. ಅಶ್ವತ್ಥಾಮನು ರೋಷಿ, ಕರ್ಣನಿರುವವರೆಗೂ ಶಸ್ತ್ರವನ್ನು ತೊಡೆನೆಂದು ಅದನ್ನು ಕೆಳಕ್ಕೆ ಹಾಕಿದನು. ಕರ್ಣನು ಆಗಲೂ ಅಪಹಾಸ್ಯ ಮಾಡಿದನು. ಅಷ್ಟರಲ್ಲಿ ಅತ್ತ ರಣಭೂಮಿಯಲ್ಲಿ ಭೀಮಸೇನನು ದುಶ್ಶಾಸನನನ್ನು ಹಿಡಿದು ಕೆಡವಿ ವೀರಾಲಾಪವನ್ನು ಮಾಡಿದುದು ಕೇಳಬಂದಿತು. ಎಲ್ಲರೂ ಬೆಚ್ಚಿದರು. ಆಗ ಅಶ್ವತ್ಥಾಮನು ಕರ್ಣನನ್ನು ಕೊಂಕು ನುಡಿಗಳಿಂದ ''ಅಂಗರಾಜಾ, ಸೇನಾಪತಿ, ಜಾಮದಗ್ನಿ ಪ್ರಿಯಶಿಷ್ಯ, ದ್ರೋಣೋಪಹಾಸಿ, ಭುಜಬಲ ಸಂರಕ್ಷಿತ ಸಕಲಲೋಕ! ನಾನು ಆಯುಧವನ್ನು ಹಿಡಿದಿರುವ ವರೆಗೂ ಇತರ ಆಯುಧಗಳಿಂದೇನು? ಎಂದು ಮೊದಲಾಗಿ ಆಗ ಹೇಳಿದೆಯಲ್ಲವೆ? ಇದೊ ಈಗ ನಿನ್ನ ಆಯುಧದ ವಿಜೃಂಭಣೆಗೆ ತಕ್ಕ ಸಮಯವಾಗಿದೆ. ಭೀಮಸೇನನ ತೋಳತೆಕ್ಕೆಯಲ್ಲಿ ಸಿಕ್ಕಿ ಬಿದ್ದಿರುವ ದುಶ್ಶಾಸನನನ್ನು ರಕ್ಷಿಸು ಹೋಗು'' ಎಂದನು. ಕರ್ಣನು, ''ಯುವರಾಜ, ಹೆದರಬೇಡ, ಇದೊ ಬಂದೆ'' ಎಂದು ಹೊರಟನು.

ಅಶ್ವತ್ಥಾಮನು, ''ಭೀಷ್ಮ ದ್ರೋಣರಿಲ್ಲದ ಕೌರವ ಬಲವನ್ನು ಭೀಮಾರ್ಜುನರು ಕಲಕುತ್ತಿದ್ದಾರೆ. ರಾಧೇಯನಾಗಲಿ ಇವನಂತಹ ಮತ್ತಾರೇ ಆಗಲಿ ಅವರನ್ನು ತಡೆಗಟ್ಟಲು ಸಾಧ್ಯರಲ್ಲ. ಆದುದರಿಂದ ತಮ್ಮನನ್ನು ರಕ್ಷಿಸಲು ನೀನು ಹೋಗು'' ಎಂದು ದುರ್ಯೋಧನನಿಗೆ ಹೇಳಿದನು. ಅಂತೆಯೆ ದುರ್ಯೋಧನನೂ ತೆರಳಿದನು. ಅಷ್ಟರಲ್ಲಿಯೆ ಕಲಕಲಧ್ವನಿ ಕೇಳಬಂದಿತು. ಭೀಮನು ದುಶ್ಶಾಸನನ ರಕ್ತವನ್ನು ಕುಡಿದನೆಂದೇ ಅಶ್ವತ್ಥಾಮನಿಗೆ ಸ್ಪಷ್ಟವಾಯಿತು. ಅರ್ಜುನನು ಕರ್ಣ ದುರ್ಯೋಧನರಿಬ್ಬರನ್ನೂ ಅಂಬುಮಳೆಯಿಂದ ಅಟ್ಟಿಬರುತ್ತಿರುವುದನ್ನು ಅವನು ಊಹಿಸಿದನು. ಹೇಗಾದರೂ ಮಾಡಿ ದುಶ್ಶಾಸನನನ್ನು ಉಳಿಸಬೇಕೆಂದು ಅವನಿಗೆ ಕಾಂಕ್ಷೆ ಹುಟ್ಟಿತು. ''ಸಟೆಯು ಸಟೆಯೆ, ದಿಟಕ್ಕಿಂತಲೂ

ಸಟೆಯೇ ಎಷ್ಟೋವೇಳೆ ಶ್ರೇಯಸ್ಸನ್ನು ಸಾಧಿಸುವುದು. ಸ್ವರ್ಗವು ಹಾಳಾಗಲಿ. ನನಗೆ ನರಕವೇ ಬರಲಿ, ಭೀಮನಿಂದ ದುಶ್ಶಾಸನನನ್ನು ಬಿಡಿಸಿಕೊಳ್ಳುವುದಕ್ಕೆ ನಾನು ಶಸ್ತ್ರವನ್ನು ತೊರೆದಿದ್ದರೂ ತೊರೆಯು ದಿದ್ದಂತೆಯೆ, ಶಸ್ತ್ರ! ಶಸ್ತ್ರ!" ಎಂದು ಉತ್ಸುಕನಾಗಿ ಶಸ್ತ್ರವನ್ನು ಕೈಕೊಳ್ಳಲು ಬಾಗಿದನು. ಅಷ್ಟರಲ್ಲಿಯೆ "ಮಹಾತ್ಮ, ಸತ್ಯವಚನ ವನ್ನು ಮೀರುವುದು ಭಾರದ್ವಾಜಸೂನುವಾದ ನಿನಗೆ ಶ್ರೇಯವಲ್ಲ" ಎಂದು ಅಶರೀರವಾಣಿ ಕೇಳಿಸಿತು. ಅಶ್ವತ್ಥಾಮನೇನೂ ಮಾಡಲಾರ ದಾದನು. "ಎಲ್ಲ ವಿಧಗಳಲ್ಲಿಯೂ ದೇವತೆಗಳೂ ಪಾಂಡವಪಕ್ಷಪಾತಿ ಗಳಾಗಿ ಹೋಗಿದ್ದಾರೆ. ದುಶ್ಶಾಸನನ ರಕ್ತವನ್ನು ಭೀಮನು ಹೀರುತ್ತಿ ದ್ದಾಗಲೂ ಔದಾಸೀನ್ಯವನ್ನು ವಹಿಸಿದುದಾಯಿತು. ಇನ್ನು ದುರ್ಯೋಧನ ನಿಗೆ ಈ ಕಾಳೆಗದಲ್ಲಿ ಬೇರಾವ ಪ್ರಿಯವನ್ನು ಮಾಡಿಯೇನು ?" ಎಂದು ವ್ಯಥೆಪಟ್ಟು ಅಶ್ವತ್ಥಾಮನು, ಮಹಾರಾಜನ ಬೆಂಗಾವಲಿಗೆ ಕೃಪರನ್ನು ಕಳುಹಿಸಿ ಕರ್ಣನಮೇಲಿನ ಕ್ರೋಧದಿಂದ ತಾನೆಸಗಿದ ಶಸ್ತ್ರತ್ಯಾಗದ ಅನ್ಯಾಯಕ್ಕೆ ಕೊರಗುತ್ತ ಶಿಬಿರಕ್ಕೆ ಹೋದನು.

ದುರ್ಯೋಧನನು ಯುದ್ಧಭೂಮಿಗೆ ನುಗ್ಗಿ ಬಂದು, ಕರ್ಣಾ ರ್ಜುನರಿಬ್ಬರೂ ಭಯಂಕರ ಯುದ್ಧಕ್ಕೆ ತೊಡಗಿರುವುದನ್ನು ಕಂಡು ಕರ್ಣನ ಸಹಾಯಕ್ಕೆಂದು ಹೋಗುವಷ್ಟರಲ್ಲಿಯೆ ಅರ್ಜುನನ ನಿಶಿತ ಶರವೊಂದು ಅವನಿಗೆ ತಾಕಿ ರಥದಲ್ಲಿಯೆ ಮೂರ್ಛೆ ಹೋದನು. ಅವನ ಸಾರಥಿಯು ತನ್ನ ಸ್ವಾಮಿಯ ಆ ಸ್ಥಿತಿಯನ್ನು ಕಂಡು ದುಃಖಿಸಿ ಆತನನ್ನು ರಕ್ಷಿಸುವ ಆಸೆಯಿಂದ ರಥವನ್ನು ಹಿಂದೋಡಿಸಿಕೊಂಡು ಬಂದನು. ಆಗಲೆ ದುಶ್ಶಾಸನನ ರಕ್ತವನ್ನು ಹೀರಿ ಭೀಮನು ಶರೀರಾ ದ್ಯಂತವೂ ಆ ರಕ್ತವನ್ನು ಲೇಪಿಸಿಕೊಂಡು ಭಯಂಕರವಾಗಿ ತೋರು ತ್ತಿದ್ದುದು, ವೀರರೆಲ್ಲರೂ ಆ ಅಸಹ್ಯದೃಶ್ಯವನ್ನು ಕಂಡು ದಿಕ್ಕುದಿಕ್ಕು ಗಳಿಗೂ ಓಡಿಹೋಗುತ್ತಿದ್ದುದು, ಕೃಪಾಚಾರ್ಯರು ಅವರಿಗೆ ಧೈರ್ಯ ಹೇಳಿ ದೇಹದ ಆಸೆಯನ್ನೆ ತೊರೆದು ಕಾದುತ್ತಿದ್ದ ಕರ್ಣನಿಗೆ ಸಹಾಯ ಮಾಡುತ್ತಿದ್ದುದು ಅವನಿಗೆ ಗೊತ್ತಾಯಿತು. ಅಷ್ಟರಲ್ಲಿ ಕೃತಪ್ರತಿಜ್ಞನಾದ ಭೀಮನ ವೀರಾಲಾಪವನ್ನು ಕೇಳಿ, ಅವನು ಸಮೀಪಿಸುತ್ತಿರುವುದನ್ನು

ಕಂಡು, ಅರಸನಿಗೆ ವಿಪತ್ತಡಸುವುದೆಂದು ಬೆದರಿ, ಬೇಗಬೇಗನೆ ರಥವನ್ನು ಓಡಿಸಿಕೊಂಡು ಬಂದು, ರಣರಂಗದ ಸಮೀಪದಲ್ಲಿಯೆ ಇದ್ದ ಆಲದ ಮರವೊಂದರ ಅಡಿಯಲ್ಲಿ ನಿಲ್ಲಿಸಿದನು.

ಸ್ವಲ್ಪ ಹೊತ್ತಾದಮೇಲೆ ದುರ್ಯೋಧನನಿಗೆ ಮೂರ್ಛೆ ತಿಳಿಯಿತು. ಕೂಡಲೆ ಅವನು, "ವತ್ಸ, ಹೆದರಬೇಡ" ಎಂದು ಘೋಷಿಸಿ, ರಥವನ್ನು ಭೀಮನಿರುವೆಡೆಗೆ ನಡೆಯಿಸೆಂದು ಆಜ್ಞಾಪಿಸಿದನು. ತಾನಿನ್ನೂ ರಣರಂಗದಲ್ಲೇ ಇರುವುದಾಗಿಯೂ, ತಮ್ಮನಾದ ದುಶ್ಶಾಸನನ ಸಾಹ್ಯಕ್ಕಾಗಿಯೆ ಮುಂದುವರಿಯುತ್ತಿರುವುದಾಗಿಯೂ ದುರ್ಯೋಧನನ ಎಣಿಕೆ. ಸಾರಥಿಯು ನಿರ್ವಾಹವಿಲ್ಲದೆ ಬಂದು, ಭೀಮನು ಕೃತಪ್ರತಿಜ್ಞನಾಗಿ ಮುನ್ನುಗ್ಗಿ ಮೂರ್ಛೆ ಸಂದಿದ್ದ ದುರ್ಯೋಧನನ ಮೇಲೆ ಬೀಳಬಹುದೆಂಬ ಶಂಕೆಯುದಿಸಿ ತಾನು ರಣರಂಗದಿಂದ ರಥವನ್ನು ಅಲ್ಲಿಗೆ ತಂದುದಾಗಿ ತಿಳಿಸಿದನು. ತಮ್ಮನಾದ ದುಶ್ಶಾಸನನ ಮೃತಿಯಿಂದ ಒಂದು ಕಡೆ ದುಃಖ, ವೀರರೊಡನೆ ವೀರನಾಗಿ ಕಾದುತ್ತಿದ್ದ ತಾನು ದೈವವಶಾತ್ ಮೂರ್ಛೆಗೊಂಡಿದ್ದ ಮಾತ್ರಕ್ಕೇ ಮಾನಾಪಮಾನಗಳ ಪರಿವೆಯೆ ಇಲ್ಲದೆ, ಸಾರಥಿಯು ರಥವನ್ನು ಹಿಂತಿರುಗಿಸಿಕೊಂಡು ಬಂದನಲ್ಲ ಎಂಬ ರೋಷವೊಂದುಕಡೆ—ಮಾನಧನನಾದ ದುರ್ಯೋಧನನ ಮನಸ್ಸು ಕಲಕಿಬಿಟ್ಟವು. ಸಾರಥಿಯಮೇಲೆ ಕೆರಳಿ ಬಗಬಗೆಯಾಗಿ ಅವನನ್ನು ಹೀಯಾಳಿಸಿದನು. ನಡೆದ ಸಂಗತಿಯೆಲ್ಲವನ್ನೂ ಇದ್ದುದನ್ನು ಇದ್ದಂತೆ ಅರಿಕೆಮಾಡಿ, ಎಷ್ಟು ಸಮಾಧಾನಗೊಳಿಸಿದರೂ ಅವನು ಉಕ್ಕಿ ಬರುತ್ತಿರುವ ದುಃಖದಿಂದ, "ಹಗೆಯೊಡನೆ ಹೋರಾಡಿ ಮೂರ್ಛೆಗೊಂಡಿರುವಾಗ ಅವನ ಬಳಿಯಲ್ಲಿಯೇ ಇದ್ದು ಅವನ ಶಸ್ತ್ರ ಪ್ರಹಾರಗಳಿಂದಲೆ ನನಗೆ ಮೂರ್ಛೆ ತಿಳಿದಿದ್ದಿದ್ದರೆ ನನ್ನ ಮನಸ್ಸಿಗೆ ಎಷ್ಟೋ ಸಮಾಧಾನವಾಗುತ್ತಿದ್ದಿತು" ಎಂದು ಮರುಗಿ, "ಅಕ್ಕಟಾ! ನನಗೆ ಸಾವು ಸಮ್ಮತವಾದರೂ ಭೀಮನ ಗದಾಘಾತದಿಂದ ಬರುವ ಸಾವಲ್ಲ. ನಂಟರೆಲ್ಲ ನಾಶಗೊಂಡಮೇಲೆ ಜಯದೊರೆತು ರಾಜ್ಯವು ರೂಢಮೂಲವಾದರೂ ಅದರಿಂದ ನನಗಾವ ಫಲವುಂಟು" ಎಂದು ಉತ್ಕಂಠನಾಗಿ ಪ್ರಲಪಿಸಿದನು. ದುರ್ಯೋಧನನು ಹೀಗೆ ದುಃಖದಲ್ಲಿ

ಮುಳುಗಿದ್ದಂತೆಯೆ ಅವನು ಮತ್ತೊಂದು ದುಃಖವಾರ್ತೆಯನ್ನು ಕೇಳ ಬೇಕಾಗಿ ಬಂದಿತು.

ದುಶ್ಶಾಸನನ ವಧೆಯಾದ ಬಳಿಕ ಕರ್ಣನು ಬಹಳವಾಗಿ ಕೆರಳಿ ಭೀಮನ ಮೇಲೆ ಅಸ್ತ್ರವರ್ಷವನ್ನೇ ಕರೆಯುತ್ತ ಪ್ರಚಂಡ ರಣವನ್ನು ಹೂಡಿ ನಿಂತನು. ಭೀಮನಾದರೊ ಉತ್ಸಾಹದ ಉದ್ರೇಕದಿಂದ ಮೈಮರೆತು ರಣರಂಗದಲ್ಲಿ ಸಂಚರಿಸುತ್ತಿದ್ದಾನೆ. ಕಡುಗಲಿಗಳೂ ಅವನ ತುಳಿತಕ್ಕೆ ಒರಗಿ ಬೀಳುತ್ತಿದ್ದಾರೆ. ಕಡೆಗೆ ಕರ್ಣ ಭೀಮರಿಬ್ಬರಿಗೂ ತುಮುಲ ಯುದ್ಧ ಘಟಿಸಿತು. ಆಗ ಅರ್ಜುನನು, ತನ್ನ ಅಗ್ರಜನು ಕರ್ಣನಿಗೆ ಸೋತನೆಂದು ಶಂಕಿಸಿ ರಥವನ್ನು ಕರ್ಣನಿದ್ದ ಕಡೆಗೆ ಬಿಟ್ಟು ಕೊಂಡು ಬಂದು ಸಿಂಹ ಗರ್ಜನೆ ಮಾಡಿದನು. ಆಗ ಕರ್ಣಪುತ್ರನಾದ ವೃಷಸೇನನು ತಂದೆಯಮೇಲೆ ಎರಗಬರುತ್ತಿದ್ದ ಅರ್ಜುನನಮೇಲೆ ಕೂರಂಬುಗಳನ್ನು ಎಸೆದು ಘಾತಿಸಿದನು. ಅರ್ಜುನನಿಗೆ ಆ ಬಾಲಕನ ಮೇಲೆ ಯುದ್ಧಮಾಡುವ ಬಯಕೆ ಇರಲಿಲ್ಲ. ಆದರೂ ವೃಷಸೇನನ ಕೈ ಚಳಕವನ್ನೂ ಅವನ ಪರಾಕ್ರಮವನ್ನೂ ಕಂಡು ಮುಗ್ಧನಾಗಿ, ನಿರ್ವಾಹವಿಲ್ಲದೆ ಬಂದು ಅವನ ರಥ ತುರಗಗಳನ್ನೂ ಧನುಸ್ಸಿನ ಸಾರಿಯನ್ನೂ ತುಂಡರಿಸಿ ಕೆಡವಿ, ಕರ್ಣನು ನೋಡುತ್ತಿರುವಂತೆಯೆ ಅವನನ್ನು ಕೊಲ್ಲ ಬಯಸಿ, "ಕರ್ಣ, ನಾನು ಬಳಿಯಿಲ್ಲದಾಗ ನೀವೆಲ್ಲರೂ ಸೇರಿ ನನ್ನ ಅಭಿಮನ್ಯುವನ್ನು ಕೊಂದಿರಿ. ಇದೊ ನಾನು ನಿನ್ನೆದುರೇ ನಿನ್ನ ಮಗನನ್ನು ಕೊಲ್ಲುವೆನು" ಎಂದು ನುಡಿದು ಮರ್ಮಭೇದಕವಾದ ಶರವನ್ನೆಸೆದು ಆ ಬಾಲಕನನ್ನು ಬೀಳಿಸಿದನು. ಈ ವೃತ್ತಾಂತವೆಲ್ಲವನ್ನೂ ರಣರಂಗದಿಂದ ಹಿಂತಿರುಗಿದ ಸುಂದರಕನು ದುರ್ಯೋಧನನಿಗೆ ತಿಳಿಸಿದ್ದೂ ಅಲ್ಲದೆ ಪುತ್ರವಧೆಯಿಂದ ರೋಷಪೂರಿತನಾಗಿ ರಕ್ಷಾವರಣವನ್ನೇ ಕಿತ್ತೊಗೆದು ಪಾರ್ಥನೊಡನೆ ಸೆಣಸಿ ನಿಂತು ಕಾದಿ ಕಡೆಗೆ ಸಮರಭೂಮಿಗೆ ತನುವನ್ನರ್ಪಿಸಿದ ಕರ್ಣನ ಶೌರ್ಯವನ್ನು ವರ್ಣಿಸಿದನು.

ದುರ್ಯೋಧನನು ಪ್ರಾಣ ಸಖನಾದ ಕರ್ಣನ ಮತ್ತು ಅವನ ಮಗನ ನಿಧನ ವಾರ್ತೆಯನ್ನು ಕೇಳಿ ಪರಿತಪಿಸುತ್ತಿರುವಂತೆಯೆ ಅವನ ತಾಯಿತಂದೆಯರಾದ ಗಾಂಧಾರೀಧೃತರಾಷ್ಟ್ರರು ಅವನನ್ನು ಕಾಣಲು

ಬಂದರು. ಸಂಜಯನು ಆ ಅಂಧ ದಂಪತಿಗಳನ್ನು ಕರೆದುತಂದನು. ಮಕ್ಕಳೆಲ್ಲರೂ ಪರಲೋಕವನ್ನು ಸೇರಿ, ಜ್ಯೇಷ್ಠನಾದ ದುರ್ಯೋಧನ ನೊಬ್ಬನೇ ಉಳಿದಿದ್ದುದರಿಂದ ಅವನನ್ನಾದರೂ ಸಂಧಿಗೆ ಒಡಂಬಡಿಸಿ ಯುದ್ಧವನ್ನು ಸಾಕುಮಾಡಬೇಕೆಂದು ಉಪದೇಶಿಸಲೋಸುಗವೇ ಅವರು ಅಲ್ಲಿಗೆ ಬಂದಿದ್ದುದು. ಸಂಜಯನೂ ಅವರೂ ಎಷ್ಟುಬಗೆಯಲ್ಲಿ ಉಪದೇಶ ಮಾಡಿದರೂ ದುರ್ಯೋಧನನು ಒಪ್ಪಲಿಲ್ಲ. ನೂರುಮಂದಿ ತಮ್ಮಂದಿರು ಪಿತಾಮಹರು ಗುರುಗಳು ಸಾಮಂತ ನರೇಶ್ವರರು ಮೊದಲಾಗಿ ಎಲ್ಲರೂ ಸಭೆಯನ್ನಲಂಕರಿಸಿದ್ದಾಗ ಧರ್ಮರಾಜನ ಸಂದೇಶವನ್ನು ಕೈಕೊಂಡು ಕೃಷ್ಣನೇ ಸಂಧಾನ ನಡೆಯಿಸಿದಂದು ಸಂಧಿಗೆ ಒಪ್ಪದಿದ್ದ ತಾನು ಈಗ ಒಪ್ಪಿದರೆ ತನ್ನ ಮಾನಕ್ಕೆ ಹಾನಿತಟ್ಟುವುದೆಂದು ಅವನು ಉತ್ತರ ಹೇಳಿದನು. ಅಷ್ಟರಲ್ಲಿಯೆ ಭೀಮಾರ್ಜುನರು ಅವನನ್ನೇ ಹುಡುಕುತ್ತ ವೀರಾಲಾಪಗಳನ್ನು ಘೋಷಿಸುತ್ತ ಬರುತ್ತಿರುವ ಸಂಗತಿಯು ಅವನಿಗೆ ತಿಳಿಯಿತು; ಧೀರನಾಗಿ ತಾನಲ್ಲಿರುವ ಸಂಗತಿಯನ್ನು ಸೂತನೊಡನೆ ಅವರಿಗೆ ಹೇಳಿಕಳುಹಿಸಿದನು. ಸೂತನು, ಭೀಮಾರ್ಜುನರಿಗೆ, "ಅಯ್ಯಾ, ಮಹಾರಾಜನು ತಾಯಿ ತಂದೆಯರೊಡನೆ ಈ ನ್ಯಗ್ರೋಧ ವೃಕ್ಷಚ್ಛಾಯೆ ಯಲ್ಲಿ ಕುಳಿತಿರುವನು" ಎಂದು ಅರಿಕೆ ಮಾಡಿದನು.

ಪಾರ್ಥನು ಇದನ್ನು ಕೇಳಿದೊಡನೆಯೇ ಪುತ್ರಶತ ನಿಧನದಿಂದ ಕೊರಗುತ್ತಿರುವ ಗಾಂಧಾರೀಧೃತರಾಷ್ಟ್ರರ ಸಮ್ಮುಖದಲ್ಲಿ ದುರ್ಯೋಧನ ನನ್ನು ಕಾಣುವುದು ಉಚಿತವಲ್ಲವೆಂದು ಹಿಂತಿರುಗುವುದರಲ್ಲಿರಲು, ಭೀಮನು, "ಮೂಢ, ಸಮುದಾಚಾರವನ್ನು ಮೀರಬಾರದು; ಗುರು ಜನರನ್ನು ಕಂಡು ನಮಸ್ಕರಿಸಿ ಮರಳೋಣ" ಎಂದು ಹೇಳಿ, ಅವರ ಬಳಿಗೆ ಹೋದನು. ಭೀಮಾರ್ಜುನರು ಗಾಂಧಾರೀಧೃತರಾಷ್ಟ್ರರಿಗೆ ನಮಸ್ಕರಿಸುವಾಗ ತಮ್ಮ ವಿಜಯ ಪ್ರಶಂಸೆಯನ್ನು ಮಾಡಿಕೊಂಡುದನ್ನು ಕೇಳಿ ವೃದ್ಧದಂಪತಿಗಳಿಗೆ ಬಹಳ ದುಃಖವಾಯಿತು. ಧೃತರಾಷ್ಟ್ರನು ಭೀಮನನ್ನು ಕುರಿತು, "ನೀನು ಸುಮ್ಮನೆ ಹೊಗಳಿಕೊಳ್ಳುವುದರಿಂದ ಪ್ರಯೋಜನವಿಲ್ಲ. ಶತ್ರುಗಳನ್ನು ಸಂಹರಿಸುವುದಾಗಲಿ ಅವರಿಂದ ಸಂಹೃತನಾಗುವುದಾಗಲಿ ರಾಜನಾದವನಿಗೆ ಸಹಜವೆ. ನೀನು ಮಾಡಿದ

ಈ ಕಾರ್ಯವು ಹೊಸದೇನೂ ಅಲ್ಲವಲ್ಲ'' ಎಂದು ಅಸಹನೆಯಿಂದ ಮುನಿದು ನುಡಿದನು. ಆಗ ಭೀಮನು ಅವನನ್ನು ಮತ್ತಷ್ಟು ನೋಯಿಸುವ ಮಾತುಗಳಿಂದ ಹೀಗೆ ಮಾತನಾಡಿದನು. ''ತಂದೆಯೆ, ನಾನು ಸ್ವಭುಜ ಬಲಶ್ಲಾಘನೆಗಾಗಲಿ ದರ್ಪಕ್ಕಾಗಲಿ ವಿಜಯವನ್ನು ನಿನ್ನಲ್ಲಿ ಹೇಳುತ್ತಿಲ್ಲ. ಮೊದಲಿಂದಲೂ ಎಲ್ಲರೂ ಮಾಡಿದ ಎಲ್ಲ ಕಾರ್ಯಗಳಿಗೂ ನೀನೇ ಸಾಕ್ಷಿಯಾಗಿದ್ದುದರಿಂದ ಈಗ ನಾನೆಸಗಿದ ಕಾರ್ಯವನ್ನು ನಿನ್ನಲ್ಲಿ ಹೇಳಿಕೊಳ್ಳದಿರುವುದು ಅಪರಾಧವಾದೀತು ಎಂದು ನುಡಿದೆನು.''

ಈ ಮಾತನ್ನು ಕೇಳಿದೊಡನೆಯೆ ದುರ್ಯೋಧನನ ರಕ್ತವು ಕುದಿಯಿತು. ಅವನು ತನ್ನನ್ನು ಗೆಲ್ಲದೆ ಹಾಗೆ ಪೌರುಷವನ್ನು ವಿಜೃಂಭಿಸ ಕೂಡದೆಂದೂ, ಅದರಲ್ಲಿಯೂ ವೃದ್ಧ ದಂಪತಿಗಳ ಮುಂದೆ ಆತ್ಮಶ್ಲಾಘನೆ ಮಾಡಿಕೊಳ್ಳಕೂಡದೆಂದೂ ಜರೆದನು. ಅಷ್ಟರಲ್ಲಿಯೇ ಯುಧಿಷ್ಠಿರನು ಭೀಮಾರ್ಜುನರಿಗಾಗಿ ಹೇಳಿಕಳುಹಿಸಿದ್ದ ಸುದ್ದಿಯು ತಿಳಿಯಲು ಅವ ರಿಬ್ಬರೂ ರಣರಂಗದಲ್ಲಿ ಮಡಿದುರುಳಿದ್ದ ಬಾಂಧವರನ್ನು ಹುಡುಕಲು ಹೊರಟುಹೋದರು.

ಅವರು ಅತ್ತ ಹೊರಟುಹೋಗುತ್ತಲೆ, ಇತ್ತ ತನ್ನ ಪ್ರತಿಜ್ಞೆಯಂತೆ ಮತ್ತೆ ಆಯುಧವನ್ನು ತೊಟ್ಟು ಮಹಾರಾಜನಾದ ದುರ್ಯೋಧನನಿಗೆ ಸೇವೆಯನ್ನು ಸಲ್ಲಿಸಲು ಅಶ್ವತ್ಥಾಮನು ಅಲ್ಲಿಗೆ ಬಂದನು. ಗಾಂಧಾರೀ ಧೃತರಾಷ್ಟ್ರರಿಬ್ಬರೂ ಭೀಷ್ಮದ್ರೋಣಕರ್ಣರು ಆದಮೇಲೆ ಅವರಿಗೆ ಸಮಸಮನಾಗಿ ಶೌರ್ಯವನ್ನು ಮೆರೆಯಬಲ್ಲವನೆಂದರೆ ಅಶ್ವತ್ಥಾಮನೇ ಎಂಬುದನ್ನು ಚೆನ್ನಾಗಿ ಬಲ್ಲವರಾಗಿದ್ದುದರಿಂದ ಅವನನ್ನು ಉಚಿತರೀತಿ ಯಿಂದ ಕಂಡು ಮರ್ಯಾದಿಸಬೇಕೆಂದು ದುರ್ಯೋಧನನಿಗೆ ತಿಳಿಸಿದರು. ದುರ್ಯೋಧನನು ಕರ್ಣನ ವಧೆಯನ್ನೇ ಕೋರಿ ಕಾದಿದ್ದ ಅವನನ್ನು ಸತ್ಕರಿಸಲು ಸಮ್ಮತಿಸಲಿಲ್ಲ. ಅಶ್ವತ್ಥಾಮನು ರಾಜನ ಮನಸ್ಸನ್ನು ಅರಿತು, ಕುಗ್ಗಿದ ಮನಸ್ಸಿನಿಂದ, ಆ ತಿರಸ್ಕಾರವನ್ನು ಹೇಗೆಹೇಗೆಯೋ ಸಹಿಸಿ ಕೊಂಡು ಮಂಗಳವಾಗಲೆಂದು ಹರಸಿ ಹೊರಟುಹೋದನು. ಗಾಂಧಾರೀ ಧೃತರಾಷ್ಟ್ರರೂ ತಮ್ಮ ದೌರ್ಭಾಗ್ಯಕ್ಕೆ ಮರುಗಿ ಶಲ್ಯನ ಶಿಬಿರಕ್ಕೆ ಹಿಂತಿರುಗಿದರು.

ಎಲ್ಲರೂ ಹೊರಟುಹೋದ ಬಳಿಕ ಮಾನಧನನಾದ ದುರ್ಯೋಧನನ ಮನಸ್ಸಿನಲ್ಲಿ ಬಗೆಬಗೆಯ ಯೋಚನೆಗಳು ಸುಳಿದಾಡಿದವು. ಭೀಮನು ತಾನು ಮಾಡಿದ ಪ್ರತಿಜ್ಞೆಯಲ್ಲಿ ಮುಕ್ಕಾಲು ಭಾಗವನ್ನು ಸಾಧಿಸಿಕೊಂಡಿರುವ ಸಂಗತಿಯನ್ನು ಅವನು ಮನಸ್ಸಿಗೆ ತಂದುಕೊಂಡು ತನ್ನನ್ನು ಹೇಗಾದರೂ ಅವನು ಕೊಲ್ಲುವನೆಂದು ನಿರ್ಧರಿಸಿ ಕಡೆಗೆ ಯಾರಿಗೂ ಗೊತ್ತಾಗದಂತೆ ಬಳಿಯಲ್ಲಿದ್ದ ಒಂದು ಸರೋವರದಲ್ಲಿ ಜಲಸ್ತಂಭನಮಾಡಿ ಅಡಗಿಕೊಂಡನು. ಈ ಸುದ್ದಿಯು ಕಾಡಿನ ಬೇಡನೊಬ್ಬನಿಂದ ಭೀಮನಿಗೆ ತಿಳಿಯಿತು. ಕೂಡಲೆ ಅವನು ಕೃಷ್ಣಾರ್ಜುನರೊಡನೆ ಆ ಸರೋವರದ ಬಳಿಗೆ ಹೋಗಿ ಗದಾಘಾತದಿಂದಲೇ ಅದನ್ನು ಉಲ್ಲೋಲಕಲ್ಲೋಲಗೊಳಿಸಿ, "ಎಲವೊ ದುರ್ಯೋಧನನೆ, ಮಾಡಬಾರದ ಕಾರ್ಯಗಳೆಲ್ಲವನ್ನೂ ಮಾಡಿದೆ. ಕುಲವೆಲ್ಲವನ್ನೂ ನಾಶಗೊಳಿಸಿದೆ. ನಿನ್ನ ದುಷ್ಕಾರ್ಯಗಳೆಲ್ಲಕ್ಕೂ ನೆರವಾಗಿದ್ದ ಕರ್ಣದುಶ್ಶಾಸನರು ಮಡಿದುರುಳಿದರು. ಈಗ ನನ್ನ ಭಯದಿಂದ ಸರೋವರವನ್ನು ಹೊಕ್ಕು ವ್ಯಾಮರೆಯಿಸಿಕೊಂಡಿರುವೆಯಾ? ಧೀರನಾದರೆ ಹೊರಗೆ ಬಾ!" ಎಂದು ಆರ್ಭಟಿಸಿದನು. ಕೆಚ್ಚೆದೆಯ ದುರ್ಯೋಧನನು ಕೂಡಲೆ ಮೇಲಕ್ಕೆ ಬಂದು, "ಎಲವೊ ಭೀಮ, ಈ ದುರ್ಯೋಧನನು ನಿನಗೆ ಭಯಪಟ್ಟು ಅಡಗಿಕೊಂಡನೆಂದರಿತೆಯಾ? ತಿಳಿಗೇಡಿ, ನಾನು ಪಾಂಡವರನ್ನು ಮುಗಿಸದೆ ಹೊರಗೆ ಬರಲು ನಾಚಿ, ಪಾತಾಳಮೂಲದಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದೆನು" ಎಂದು ಹೇಳಿದನು. ಆಗ ಕೃಷ್ಣನು "ನೀರಿನಲ್ಲಿ ಕಾಳಗವು ಉಚಿತವಲ್ಲ" ಎಂದು ಅವನನ್ನು ಹೊರಗೆ ಬರಮಾಡಿದನು.

ದುರ್ಯೋಧನನು ಗತ್ಯಂತರವಿಲ್ಲದೆ ಹೊರಗೆ ಬಂದು, ಗದೆಯನ್ನು ಕೆಳಗಿಟ್ಟು ನೂರುಮಂದಿ ತಮ್ಮಂದಿರ, ಆನೆ ಕುದುರೆ ಪದಾತಿಗಳ ಕಳೇಬರಗಳ ಮೇಲೆರಗಿ ಕುಳಿತಿರುವ ಖಗಮೃಗಗಳ ಗುಂಪೊಡಗೂಡಿದ ಕಾಳೆಗದ ನೆಲವನ್ನೊಮ್ಮೆಯೂ, ವಿಜಯೋತ್ಕರ್ಷದಿಂದ ಸಿಂಹನಾದವನ್ನು ವಿಜೃಂಭಿಸಿ ತೂರ್ಯರವದಿಂದ ತುಂಬಿ ತುಳುಕುತ್ತಿರುವ ಪಾಂಡವ ಸೇನೆಯನ್ನೊಮ್ಮೆಯೂ ನೆಟ್ಟನೆ ನೋಡಿನೋಡಿ ಬಿಸಿಯುಸಿರಿಟ್ಟನು. ಅವನ ಅಭಿಪ್ರಾಯವು ಭೀಮನಿಗೆ ಸಂಪೂರ್ಣವಾಗಿ ಮನವರಿಕೆಯಾಯಿತು.

"ಕುರುರಾಜ, ದುಃಖಿಸಬೇಡ. ಅಸಹಾಯನೆಂಬ ಯೋಚನೆಯು ನಿನಗಿಲ್ಲದಿರಲಿ. ನಮ್ಮ ಐವರಲ್ಲಿ ನಿನಗೆ ಯಾರೊಡನೆ ಕಾಳಿಗಮಾಡುವ ಬಯಕೆಯುಂಟೊ ಅವನೊಡನೆಯೇ ಕಾಳಿಗ ನಡೆಯ್ಕಲಿ" ಎಂದು ಹೇಳಿದನು. ಆಗ ದುರ್ಯೋಧನನು ಅನುಜನಾದ ದುಶ್ಶಾಸನನನ್ನು ಮಡುಹಿದ ಭೀಮನೂ, ಮಿತ್ರನಾದ ಕರ್ಣನನ್ನು ಕೊಂದ ಅರ್ಜುನನೂ ಇಬ್ಬರೂ ತನಗೆ ಸಮಶತ್ರುಗಳಾದರೂ ಸಾಹಸಪ್ರಿಯನಾದ ಭೀಮನೇ ತನಗೆ ಸರಿಯಾದ ಪ್ರತಿಸ್ಪರ್ಧಿಯೆಂದು ನಿಶ್ಚಯಿಸಿ ಅವನೊಡನೆ ಗದಾ ಯುದ್ಧಕ್ಕೆ ತೊಡಗಿದನು.

ಭೀಮ ದುರ್ಯೋಧನರಿಬ್ಬರೂ ಗದಾ ಯುದ್ಧದಲ್ಲಿ ತೊಡಗಿರಲು ಆ ಯುದ್ಧದಲ್ಲಿ ಭೀಮನೇ ಗೆಲ್ಲುವನೆಂದು ಚೆನ್ನಾಗಿ ತಿಳಿದಿದ್ದ ಕೃಷ್ಣನು ಪಾಂಚಾಲದೇಶದವನೊಬ್ಬನನ್ನು ಕರೆದು ಧರ್ಮರಾಜನ ಪಟ್ಟಾಭಿಷೇಕ ಕ್ಕಾಗಿ ಎಲ್ಲ ಸಲಕರಣಗಳನ್ನೂ ಸಿದ್ಧಗೊಳಿಸಬೇಕೆಂದು ಹೇಳಿಕಳುಹಿಸಿ ದನು. ಅಂತೆಯೆ ಎಲ್ಲೆಲ್ಲಿಯೂ ಆ ಮಹೋತ್ಸವದ ಕಾರ್ಯಗಳು ನಡೆಯತೊಡಗಿದುವು. ಇಷ್ಟರಲ್ಲಿ ದುರ್ಯೋಧನನ ಗೆಳೆಯನಾದ ಚಾರ್ವಾಕನೆಂಬ ರಾಕ್ಷಸನೊಬ್ಬನು ಯಾವರೀತಿಯಿಂದಲಾದರೂ ಪಾಂಡ ವರನ್ನು ಮೋಸಗೊಳಿಸಿ, ತನ್ನ ಗೆಳೆಯನಿಗೆ ವಿಜಯವನ್ನು ದೊರಕಿಸಿಕೊಡ ಬೇಕೆಂಬ ಉದ್ದೇಶದಿಂದ ಮುನಿವೇಷವನ್ನು ಧರಿಸಿ ಯುಧಿಷ್ಠಿರನ ಶಿಬಿರ ದ್ವಾರಕ್ಕೆ ಬಂದು, "ಬಹಳ ಬಾಯಾರಿಕೆಯಾಗಿದೆ, ನೀರು ನೆರಳುಗಳನ್ನಿತ್ತು ರಕ್ಷಿಸಬೇಕು" ಎಂದು ಕೂಗಿದನು. ಒಳಗಿದ್ದ ಯುಧಿಷ್ಠಿರನು ಅವನನ್ನು ಕಂಡು ಮುನಿಯೆಂದೇ ಭ್ರಮಿಸಿ, ಒಳಕ್ಕೆ ಬರಮಾಡಿಕೊಂಡು ಗೌರವಿ ಸಿದನು. ಚಾರ್ವಾಕನು ಅವನಿತ್ತ ಜಲವನ್ನು ಕೊಂಡು ಕಾಲುಗಳನ್ನು ಮಾತ್ರ ತೊಳೆದುಕೊಂಡು ಏನೋ ಆಲೋಚಿಸಿದವನಂತೆ ನಟಿಸಿ, ಕ್ಷತ್ರಿಯ ರೆಂಬ ವ್ಯಾಜದಿಂದ ಜಲಪಾನಮಾಡದೆ ನೆಳಲೇ ಸಾಕೆಂದು ಕುಳಿತನು. ತಾನು ಭೀಮ ದುರ್ಯೋಧನರ ಗದಾ ಯುದ್ಧವನ್ನು ನೋಡಿಬಂದ ಸಮಾಚಾರವನ್ನು ತಿಳಿಸುತ್ತ ಅವರ ಉತ್ಸಾಹವನ್ನು ಉಕ್ಕಿಸಿ, ಕಡೆಗೆ ದುರ್ಯೋಧನನಿಂದ ಭೀಮನು ಉರುಳಿದನೆಂಬ ಸುಳ್ಳು ಸುದ್ದಿಯನ್ನು ಅರುಹಿದನು. ಅಲ್ಲಿದ್ದ ದ್ರೌಪದಿಯು ತನ್ನ ಆಶೋತ್ತರಗಳೆಲ್ಲವೂ